KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಜೂನ್ ೫, ೨೦೦೮ (ಜೇಷ್ಠ ೧೫, ಶಕ ವರ್ಷ ೧೯೩೦) | ಸಂಚಿಕೆ ೨೩ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಹಾವೇರಿ**

**ಸಂಖ್ಯೆ: ಜಿಸಕಅ/ ಎಸ್–4/ ಕಾ.ಪ.ತ./ ಸಿಆರ್/ 08–09/611, ದಿನಾಂಕ:9ನೇ ಮೇ, 2008**

**ವಿಷಯ:** 2008–09ನೇ ಸಾಲಿಗಾಗಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: SWL-68/SEW-89, ಬೆಂಗಳೂರು ದಿನಾಂಕ:02.11.1990.

2) ಸರ್ಕಾರಿ ಆದೇಶ ಸಂಖ್ಯೆ: ಸಕಇ:421: ಪಕವಿ:95: ದಿನಾಂಕ:29.07.1997.

3) ಸರ್ಕಾರದ ಆದೇಶ ಸಂಖ್ಯೆ: ಸಕಇ:349: ಪಕವಿ:05: ದಿನಾಂಕ:28.01.2006.

2008–09ನೇ ಸಾಲಿಗಾಗಿ ಪರಿಶಿಷ್ಟ ಜಾತಿ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡುವ ಕುರಿತು ಉಲ್ಲೇಖದಲ್ಲಿ ನಮೂದಿಸಿದ ಸರ್ಕಾರಿ ಆದೇಶಗಳನ್ವಯ ಅರ್ಹ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

| ಅ. ನಂ. | ಯೋಜನೆ ಹೆಸರು | ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ | | | ತರಬೇತಿ ಅವಧಿ | ತರಬೇತಿ ಶಿಷ್ಯವೇತನ (ಪ್ರತಿ ಮಾಹೆಯಾನ) |
|---|---|---|---|---|---|---|
| | | ಪ.ಜಾ. | ಪ.ವ. | ಒಟ್ಟು | | |
| 1. | ಪರಿಶಿಷ್ಟ ಜಾತಿ/ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ಯೋಜನೆ | 12 | 4 | 16 | 4 ವರ್ಷ | ರೂ.1000.00 |

**ಅರ್ಹತೆಗಳು:**

1) ಸದರಿ ಯೋಜನೆಯಲ್ಲಿ ಅರ್ಜಿದಾರರು ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಾಗಿರಬೇಕು, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ 2 ವರ್ಷದಿಂದೀಚೆಗೆ ಕಾನೂನು ಪದವಿಯನ್ನು ಪಾಸುಮಾಡಿರಬೇಕು. ಅಂದರೆ 2006–07, 2007–08ನೇ ಸಾಲಿನಲ್ಲಿ ಅಂತಿಮ ಕಾನೂನು ಪರೀಕ್ಷೆಗಳನ್ನು ಪಾಸಾದವರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

2) ವಕೀಲಿ ವೃತ್ತಿಯನ್ನು ನಡೆಸಲು ಅರ್ಹತೆಗಳನ್ನು ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿಗಳನ್ನು ಸಲ್ಲಿಸಲು ಅರ್ಹರು.

3) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ಗರಿಷ್ಠ ವಯಸ್ಸು 35 ವರ್ಷ ಮೀರಿರಬಾರದು.

4) ಅಪೂರ್ಣ ಮತ್ತು ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

5) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು. ಬಿಟ್ಟು ಹೋದಲ್ಲಿ ಶಿಷ್ಯವೇತನವನ್ನು ಪರತ್ ವಸೂಲ ಮಾಡಲಾಗುವುದು.

6) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ.1000.00 (ರೂ. ಒಂದು ಸಾವಿರ ಮಾತ್ರ) ದಂತೆ ಶಿಷ್ಯವೇತನ ನೀಡಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳನ್ನು ಡಿಸ್ಟಿಕ್ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಮೇಲ್ಪಟ್ಟು ವಕೀಲ ವೃತ್ತಿಯನ್ನು ನಡೆಸಿದ ಖಾಸಗಿ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

ಅರ್ಹ ಅಭ್ಯರ್ಥಿಗಳು ಸಂಬಂಧಿಸಿದ ಜಿಲ್ಲಾ/ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಿಂದ ನಿಗದಿತ ಅರ್ಜಿ ನಮೂನೆ ಪಡೆದು ಆದಾಯ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ ಜನ್ಮ ದಾಖಲೆ ಕುರಿತು (ಎಸ್.ಎಸ್.ಎಲ್.ಸಿ. ಅಂಕಪಟ್ಟಿ) ಬಾರ್ ಅಸೋಸಿಯೇಶನಲ್ಲಿ ಸದಸ್ಯತ್ವ ಪಡೆದ ಬಗ್ಗೆ ದೃಢೀಕರಣ ಪ್ರಮಾಣ ಪತ್ರ ಕಾನೂನು ಪದವೀಯ ಅಂಕಪಟ್ಟಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ:31.05.2008 ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಹಾವೇರಿ (ಜಿಲ್ಲಾ ಆಡಳಿತ ಸಂಕೀರ್ಣ ಭವನ ಬಿ ಬ್ಲಾಕ್ ದೇವಗಿರಿ) ಇವರಿಗೆ ತಲುಪುವಂತೆ ಅರ್ಜಿ ಸಲ್ಲಿಸಬೇಕು. ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾವೇರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಆಯ್ಕೆ ಸಮಿತಿಯಿಂದ ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು. ಇತರೆ ಹೆಚ್ಚಿನ ಮಾಹಿತಿಗಳನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಹಾವೇರಿ ಇವರನ್ನು ಸಂಪರ್ಕಿಸಿ ಪಡೆಯಬಹುದು.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಗೂ ಸದಸ್ಯ
ಕಾರ್ಯದರ್ಶಿ, ಕಾನೂನು ಪದವೀಧರರ ಆಡಳಿತ
ನ್ಯಾಯಾಧೀಕರಣ ತರಬೇತಿ ಆಯ್ಕೆ ಸಮಿತಿ ಹಾವೇರಿ.

ಪಿ.ಆರ್.560

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಸಂಖ್ಯೆ: ಇಇಇ/ ಬೆಂ.ಬೃ.ಕಾ.ಉ.ವಿ/ ಎಇಇ–1/ಕ/08–09/820–822, ದಿನಾಂಕ:22ನೇ ಮೇ, 2008**

ಕ.ವಿ.ಪ್ರ.ನಿ.ನಿ. ಯು 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 67ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 67(2) (ಸಿ)ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

**1) ಯೋಜನೆಯ ಹೆಸರು:** ಉದ್ದೇಶಿತ 1x8 ಎಂ.ವಿ.ಎ., 66/11 ಕೆ.ವಿ. ವಿದ್ಯುತ್ ಉಪಕೇಂದ್ರ ಚಂದ್ರಪ್ಪ ಸರ್ಕಲ್ ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು ನಗರ ಜಿಲ್ಲೆ ಮತ್ತು 66/11 ಕೆ.ವಿ. ವಿದ್ಯುತ್ ಉಪಕೇಂದ್ರ ಕುಂಬಳಗೋಡು ಯಿಂದ 9.32 ಕಿ.ಮಿ. ದೂರದಷ್ಟು ಉದ್ದೇಶಿತ 66 ಕೆ.ವಿ ಲೈನ್‌ನ್ನು ಉದ್ದೇಶಿತ 66/11 ಕೆ.ವಿ. 1x8 ಎಂ.ವಿ.ಎ. ಉಪಕೇಂದ್ರ ಚಂದ್ರಪ್ಪ ಸರ್ಕಲ್ ನಿರ್ಮಾಣ ಮಾಡುವುದು.

**2) ಯೋಜನೆಯ ಪ್ರಯೋಜನಗಳು:** ಚಂದ್ರಪ್ಪ ಸರ್ಕಲ್ ಹಾಗೂ ಸುತ್ತಮುತ್ತಲ ಪ್ರದೇಶಗಳಿಗೆ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು.

**3) 66 ಕೆ.ವಿ. ಮಾರ್ಗ ಹಾದು ಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು:** ಕುಂಬಳಗೋಡು ಕೈಗಾರಿಕಾ ಪ್ರದೇಶ, ಕುಂಬಳಗೋಡು, ಸುಬ್ಬರಾಯನಪಾಳ್ಯ, ಶೇಶಗಿರಿ ಪಾಳ್ಯಾ, ದೊಡ್ಡಯ್ಯನ ಕಾಲೋನಿ, ಮಾಯಸಂದ್ರ, ದೊನ್ನಿನಹಳ್ಳಿ ಮುಂತಾದ ಪ್ರದೇಶಗಳು.

**4) ಅಂದಾಜು ವೆಚ್ಚ:** ಕೇಂದ್ರ: 382.15 ಲಕ್ಷಗಳು.
ಮಾರ್ಗ: 257.73 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (III) ರ (ಕೇಂದ್ರೀಯ ಕಾಯದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳುಹಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ (ವಿ), ಬೆಂಗಳೂರು ಬೃಹತ್
ಪಿ.ಡಿ.59 ಕಾಮಗಾರಿ ಉತ್ತರ ವಿಭಾಗ, ಕ.ವಿ.ಪ್ರ.ನಿ.ನಿ. ಬೆಂಗಳೂರು–09.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಆಕುಕ 14 ಹೆಚ್‌ಎಸ್‌ಜಿ 2003, ಬೆಂಗಳೂರು, ದಿನಾಂಕ:12ನೇ ಮೇ, 2008**

ಆರೋಗ್ಯ ಮತ್ತು ಕುಟುಂಬ ಕಲ್ಯಣ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಕುಕ 14 ಹೆಚ್‌ಎಸ್‌ಜಿ 2003, ದಿನಾಂಕ:10.04.2008ರಲ್ಲಿ ಅಭ್ಯರ್ತಿಯ ಹೆಸರು ಮತ್ತು ವಿಳಾಸವನ್ನು ಡಾ: ಸಾವಿತ್ರಿ ಜಿ. ಕೋಷ್ಟಿ, ನಂ.32, 1ನೇ ಕ್ರಾಸ್, 2ನೇ ಮುಖ್ಯ ರಸ್ತೆ, ನಂದಿನಿ ಲೇಔಟ್ ಪೋಸ್ಟ್, ಶಂಕರ್‌ನಗರ, ಐಇಡಬ್ಲ್ಯೂ ಕಾಲೋನಿ, ಬೆಂಗಳೂರು–96 ಎಂಬುದರ ಬದಲಾಗಿ "ಡಾ: ಸಾವಿತ್ರಿ ಜಿ. ಕೋಷ್ಟಿ, ಬಿನ್ ಶ್ರೀ ಗುರಸಿದ್ದಪ್ಪ ಕೋಷ್ಟಿ, ತಿಕೋಟಾ ಗ್ರಾಮ ಮತ್ತು ಅಂಚೆ, ಬಿಜಾಪುರ ಜಿಲ್ಲೆ" ಪಿನ್‌ಕೋಡ್–586103 ಎಂದು ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.563 **ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1).

**ಸಾರ್ವಜನಿಕ ಪ್ರಕಟಣೆಗಾಗಿ**

**ಮಾಹಿತಿ ಹಕ್ಕು ಅಧಿನಿಯಮ–2005 (ಭಾರತ ಸರ್ಕಾರ)**

**ಕರ್ನಾಟಕ ಸರ್ಕಾರ**

**ಕಂದಾಯ ಇಲಾಖೆ**

**ಉಪವಿಭಾಗಾಧಿಕಾರಿಗಳ ಕಛೇರಿ, ಸಾಗರ ಉಪವಿಭಾಗ, ಸಾಗರ.**

1) **ಕಲಂ 4(1)ಬಿ(i): ಕಛೇರಿಯ ವ್ಯವಸ್ಥೆ ಮತ್ತು ಕಾರ್ಯಗಳ ವಿವರ:** ಲಗತ್ತಿಸಿರುವ ಅನುಬಂಧ–1ಎ ಮತ್ತು 1ಬಿರಂತೆ.
2) **ಕಲಂ 4(1)ಬಿ (ii): ಅಧಿಕಾರ ಮತ್ತುಕರ್ತವ್ಯಗಳು:**–ಲಗತ್ತಿಸಿರುವ ಅನುಬಂಧ–2ರಂತೆ.
3) **ಕಲಂ 4(1) ಬಿ (iii):** ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆ ಮಾರ್ಗಸೂಚಿಗಳನ್ನೊಳಗೊಂಡಂತೆ.

**ನಿರ್ಣಯ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸುವ ಕಾರ್ಯವಿಧಾನ:**

1. **ಉಪವಿಭಾಗಾಧಿಕಾರಿಗಳು:** ಪ್ರತ್ಯಾಯೋಜಿಸಿದ ಅಧಿಕಾರಿಯನ್ವಯ ಮೇಲ್ಕಂಡ ಕಾರ್ಯಗಳಡಿ ಅಂತಿಮ ನಿರ್ಣಯ ತೆಗೆದುಕೊಳ್ಳುವುದು.
2. **ವ್ಯವಸ್ಥಾಪಕರು:** ವಿಷಯ ನಿರ್ವಾಹಕರು ಮಂಡಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ತೆಗೆದುಕೊಳ್ಳಬಹುದಾದ ಕ್ರಮಗಳ ಬಗ್ಗೆ ತಿಳಿಸಿ ಉಪವಿಭಾಗಾದಿಕಾರಿಗಳವರಿಗೆ ಕಡತ ಸಲ್ಲಿಸುವುದು.
3. **ವಿಷಯ ನಿರ್ವಾಹಕರು** ಕಛೇರಿ ಕಾರ್ಯವಿಧಾನ ಕೈಪಿಡಿಯಂತೆ ಅವರಿಗೆ ವಹಿಸಿದ ಶಾಖೆಗಳಿಗೆ ಸಂಬಂಧಪಟ್ಟ ಕಾನೂನು ಅವಕಾಶ ಪರಿಶೀಲಿಸಿ ಟಿಪ್ಪಣಿಯನ್ನು ವ್ಯವಸ್ಥಾಪಕರವರಿಗೆ ಮಂಡಿಸುವುದು.

**ಕಲಂ 4(1) ಬಿ (iv): ಪ್ರಕಾರ್ಯಗಳ ನಿರ್ವಹಣೆಗೆ ಅಳವಡಿಸಿಕೊಂಡಿರುವ ಸೂತ್ರಗಳು:**

01. ಉಪವಿಭಾಗಾಧಿಕಾರಿಗಳವರು ಆದ್ಯತೆ ಮೇರೆ ಕಾರ್ಯಗಳನ್ನು ನಿರ್ವಹಿಸುವುದು.
02. ತಾಂತ್ರಿಕ ಸಹಾಯಕರು ಹಾಗೂ ಭೂ ದಾಖಲೆಗಳ ಸಹಾಯಕ ನಿರ್ದೇಶಕರ ಹುದ್ದೆ ಖಾಲಿ ಇರುತ್ತದೆ.

03. ವ್ಯವಸ್ಥಾಪಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
04. ಪ್ರಥಮ ದರ್ಜೆ ಸಹಾಯಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
05. ದ್ವಿತೀಯ ದರ್ಜೆ ಸಹಾಯಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
06. ಶೀಘ್ರಲಿಪಿಗಾರರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೆರಳಚ್ಚುಗಾರರು ದೂರವಾಣಿ ಸಂದೇಶಗಳ ನಿರ್ವಹಣೆ, ನ್ಯಾಯಾಲಯದ ಆದೇಶ, ಕಛೇರಿ ಪತ್ರವ್ಯವಹಾರಗಳ ಗಣಕೀಕರಣ ಕಾರ್ಯ, ಉಪವಿಭಾಗಾಧಿಕಾರಿಗಳವರ ದಿನಚರಿ ಹಾಗೂ ತಾತ್ಕಾಲಿಕ ಪ್ರವಾಸ ಕಾರ್ಯಕ್ರಮಗಳ ನಿರ್ವಹಣೆ ಕಾರ್ಯ ನಿರ್ವಹಿಸುವುದು.
07. ದ್ವಿತೀಯ ದರ್ಜೆ ಭೂ ಮಾಪಕರ ಹುದ್ದೆ ಖಾಲಿ ಇರುತ್ತದೆ.
08. ಬೆರಳಚ್ಚುಗಾರರು ಎಲ್ಲಾ ಶಾಖೆಯ ಪತ್ರ ವ್ಯವಹಾರಗಳು ಹಾಗೂ ಆದೇಶಗಳನ್ನು ಬೆರಳಚ್ಚು ಮಾಡುವುದು.
09. ವಾಹನ ಚಾಲಕರು, ವಾಹನ ಚಾಲನೆ ಹಾಗೂ ನಿರ್ವಹಣೆ ಮಾಡುವುದು.
10. ದಫೇದಾರ್‌ರು ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.
11. ಡಿ ಗ್ರೂಪ್ ನೌಕರರಿಗೆ ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.
12. ಬಾಂದ್ ಜವಾನ – ಹೊಸನಗರ ತಾಲ್ಲೂಕ್ ಕೆರೆಹಳ್ಳಿ ಹೋಬಳಿ ರಾಜಸ್ವ ನಿರೀಕ್ಷಕರ ಕಛೇರಿಯಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾರೆ.

4(1) ಬಿ(v): ಇಲಾಖೆಯಲ್ಲಿನ ನೌಕರರು ಪ್ರಕಾರ್ಯಗಳ ನಿರ್ವಹಣೆಗೆ ಬಳಸುತ್ತಿರುವ ಇಲಾಖೆಯಲ್ಲಿರುವ ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು:

01. ಕರ್ನಾಟಕ ಭೂ ಕಂದಾಯ ಅದಿನಿಯಮ 1964
02. ಕರ್ನಾಟಕ ಭೂ ಕಂದಾಯ ನಿಯಮ 1966
03. ಕರ್ನಾಟಕ ಭೂ ಮಂಜೂರಾತಿ ನಿಯಮ 1969
04. ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961
05. ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ಹಲವು ಜಮೀನುಗಳ ಪರಭಾರ ನಿಷೇಧ) ಅದಿನಿಯಮ 1978 ನಿಯಮ 1979
06. ಭೂ ಸ್ವಾಧೀನ ಅಧಿನಿಯಮ 1894
07. ಮತದಾರರ ನೊಂದಣಿ ನಿಯಮ 1960
08. ಕರ್ನಾಟಕ ಸಾರ್ವಜನಿಕ ಅಫೆನ್ಸ್‌ಗಳು ಅಧಿಕೃತ ಅನುಭವದಾರರನ್ನು ಹೊರಹಾಕುವುದು 1974.
09. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993
10. ಕರ್ನಾಟಕ ನಾಗರೀಕ ಸೇವಾ ನಿಯಮ 1958
11. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957
12. ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1956
13. ಸಿವಿಲ್ ಪ್ರಕ್ರಿಯಾ ಸಂಹಿತೆ 1908
14. ದಂಡ ಪ್ರಕ್ರಿಯಾ ಸಂಹಿತೆ 1974
15. ಕರ್ನಾಟಕ ಪೊಲೀಸ್ ಅಧಿನಿಯಮ 1963
16. ಭಾರತ ಸಾಕ್ಷ್ಯ ಅಧಿನಿಯಮ 1972
17. ಕಾಲಪರಿಮಿತಿ ಅದಿನಿಯಮ 1963
18. ಕರ್ನಾಟಕ ನೀರಾವರಿ ಅಧಿನಿಯಮ 1965
19. ಕರ್ನಾಟಕ ನೀರಾವರಿ (ನೀರಿನ ಕರ ಆಕರಣ) ಅಧಿನಿಯಮ 1965
20. ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡಗಳ (ದೌರ್ಜನ್ಯ) ಅದಿನಿಯಮ 1989
21. ಜೀತದಾಳು ಪದ್ಧತಿ ಅಧಿನಿಯಮ 1976
22. ವಕ್ಫ್ ಅಧಿನಿಯಮ 1954
23. ಅಪರಾಧಿಕ ಕಾನೂನು ಮತ್ತು ಕೈದಿಗಳನ್ನು ಗುರುತಿಸುವುದು (ಕರ್ನಾಟಕ ವ್ಯಾಪ್ತಿ ಮತ್ತು ತಿದ್ದುಪಡಿ)ಅಧಿನಿಯಮ 1975
24. ಕರ್ನಾಟಕ ಆರ್ಥಿಕ ಸಂಹಿತೆ

25. ಮಾಹಿತಿ ಹಕ್ಕು ಅಧಿನಿಯಮ, 2005
26. ಸಾದಿಲ್ವಾರು ವೆಚ್ಚ ನಿಯಮ (ಎಂ.ಸಿ.ಇ.)
27. ಕರ್ನಾಟಕ ಪುರಸಭೆ ಅಧಿನಿಯಮ 1964.

**4(1) ಬಿ VI: ಇಲಾಖೆ ಹೊಂದಿರುವ ಅಥವಾ ಇಲಾಖೆಯ ಸ್ವಾಧೀನದಲ್ಲಿರುವ ದಸ್ತಾವೇಜುಗಳ ಪಟ್ಟಿ:**

**ಅನುಬಂಧ–1ಬಿ** ರಲ್ಲಿ ಹೇಳಿದ ಶಾಖೆಗಳ ವಿಷಯ ವಹಿ ಮತ್ತು ವಿಲೇವಾರಿ ಕಡತಗಳು.

**ಪ್ರಗತಿ ತ:ಖ್ತೆಗಳು:** ಉಪವಿಭಾಗದ ಡಿ.ಸಿ.ಬಿ., ಹಾಜರಾತಿ ವಹಿ, ಸಾಂದರ್ಭಿಕ ರಜೆ ವಹಿ, ವ್ಯವಹಾರಿಕ ಅಂಕಿಅಂಶಗಳು, ವೇತನ ಬಟವಾಡೆ ವಹಿ, ವೇತನ ಬಡ್ತಿ ವಹಿ, ನಗದು ಪುಸ್ತಕ ವಹಿ, ಪೀಠೋಪಕರಣಗಳ ವಹಿ, ಗ್ರಂಥಾಲಯದ ವಹಿ, ಅಭಿಲೇಖಾಲಯದ ಲೇಖನ ಸಾಮಗ್ರಿ ದಾಸ್ತಾನು ವಹಿ ಮತ್ತು ವಿತರಣೆ ವಹಿ.

**4(1) ಬಿ VII:** ಕಾರ್ಯಮಿತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನ ಪ್ರತಿನಿಧಿಗಳ ಜೊತೆ ಸಮಾಲೋಚಿಸಲು ಅಥವಾ ಪ್ರಾತಿನಿಧ್ಯಕ್ಕೆ ಇರುವ ವ್ಯವಸ್ಥೆಗಳ ವಿವರಗಳು: ಇಲ್ಲಾ.

**4(1) ಬಿ VIII:** ಸಲಹೆಯನ್ನು ಪಡೆಯುವ ಸಂಬಂಧದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಇರುವಂತೆ ರಚಿಸಿರುವ ಮಂಡಳಿಗಳು ಪರಿಷತ್ತುಗಳು, ಸಮಿತಿಗಳು ಮತ್ತು ಇತರೆ ಸಂಸ್ಥೆಗಳು ಮತ್ತು ಅವುಗಳು ನಡೆಸುವ ಸಭೆಗಳು, ಸಾರ್ವಜನಿಕರಿಗೆ ಮುಕ್ತವೇ ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವುದೇ?

ಸಾಗರ ನಗರ ಸಭೆಗೆ ಆಡಳಿತಾಧಿಕಾರಿ, ಸಾಗರ ತಾಲ್ಲೂಕಿನ ನಮೂನೆ 7ಎ ಪ್ರಕರಣಗಳ ಪ್ರಾಧಿಕೃತ ಅಧಿಕಾರಿ, ಸಾಗರ ಹಾಗೂ ಹೊಸನಗರ ತಾಲ್ಲೂಕಿನ ಭೂ ನ್ಯಾಯ ಮಂಡಳಿಗೆ ಅಧ್ಯಕ್ಷರು ಹಾಗೂ ಸಾಗರ ಉಪವಿಭಾಗದ ಸಾಗರ, ಸೊರಬ, ಹೊಸನಗರ ಹಾಗೂ ಶಿಕಾರಿಪುರ ತಾಲ್ಲೂಕುಗಳ ರೈತ ಆತ್ಮಹತ್ಯೆ ತಾಲ್ಲೂಕು ಸಮಿತಿಗಳ ಅಧ್ಯಕ್ಷರಾಗಿದ್ದು, ಸದರಿ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುತ್ತವೆ.

**4(1) ಬಿ IX:** ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ (Directory):–

| ಕ್ರ. ಸಂ. | ಅಧಿಕಾರಿಗಳ & ನೌಕರರ ಹೆಸರು ಶ್ರೀಯುತರುಗಳಾದ: | ಪದನಾಮ |
|---|---|---|
| 1. | ಎಂ.ಕೆ.ಶ್ರೀರಂಗಯ್ಯ, ಕೆ.ಎ.ಎಸ್., | ಉಪವಿಭಾಗಾಧಿಕಾರಿ, ಸಾಗರ ಉಪವಿಭಾಗ, ಸಾಗರ |
| 2. | ಕೆ.ಎಸ್.ಜ್ಞಾನಪ್ಪ | ವ್ಯವಸ್ಥಾಪಕರು |
| 3. | ಎಲ್.ಬಿ.ಚಂದ್ರಶೇಖರ | ಪ್ರಥಮ ದರ್ಜೆ ಸಹಾಯಕ |
| 4. | ಜಿ.ಕೃಷ್ಣಪ್ಪ | ಪ್ರಥಮ ದರ್ಜೆ ಸಹಾಯಕ |
| 5. | ಎನ್.ಕೃಷ್ಣಮೂರ್ತಿ | ಪ್ರಥಮ ದರ್ಜೆ ಸಹಾಯಕ |
| 6. | ಎಂ.ನಾರಾಯಣ | ಪ್ರಥಮ ದರ್ಜೆ ಸಹಾಯಕ |
| 7. | ಟಿ.ಪರಮೇಶ್ವರ (ನಿಯೋಜನೆ ಮೇರೆಗೆ) | ದ್ವಿತೀಯ ದರ್ಜೆ ಸಹಾಯಕ |
| | ಕಲ್ಲಪ್ಪ ಮೆಣಸಿನಾಳ್ (ನಿಯೋಜನೆ ಮೇರೆಗೆ ಸಾಗರ ತಾಲ್ಲೂಕ್ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ) | ದ್ವಿತೀಯ ದರ್ಜೆ ಸಹಾಯಕ |
| 8. | ಶ್ರೀಮತಿ ಮಮತಾ ಜಿ.ಶರ್ಮಾ | ದ್ವಿತೀಯ ದರ್ಜೆ ಸಹಾಯಕ |
| 9. | ಬಿ.ಎಸ್.ರವೀಂದ್ರನಾಥ್ | ಬೆರಳಚ್ಚುಗಾರ |
| 10. | ಎಂ.ಆರ್.ನರಸಿಂಹ ಮೂರ್ತಿ | ಬೆರಳಚ್ಚುಗಾರ |
| 11. | ಮೇಗ್ಯಾ ನಾಯ್ಕ್ | ವಾಹನ ಚಾಲಕ |
| 12. | ಮರಿಯಪ್ಪ | ದಫೇದಾರ್ |
| 13. | ಎಲ್.ಮಹಾದೇವಪ್ಪ | ಡಿ ಗ್ರೂಪ್ ನೌಕರ |
| 14. | ಕೆ.ಚೌಡಪ್ಪ | ಡಿ ಗ್ರೂಪ್ ನೌಕರ |
| 15. | ದಾನಪ್ಪ | ಬಾಂದ್ ಜವಾನ |

**4(1) ಬಿ X: ಅಧಿಕಾರಿ / ನೌಕರರ ಹುದ್ದೆಯ ಹೆಸರು ಮತ್ತು ನಿವ್ವಳ ಸಂಬಳ:**

ವಿವರ ಅನುಬಂಧ–3 ಲಗತ್ತಿಸಿದೆ.

**4(1) ಬಿ XI ಯೋಜನೆ ವಿವರಗಳು:** ಪ್ರಸ್ತಾವಿಕ ವೆಚ್ಚಗಳು ಮತ್ತು ಬಟವಾಡೆ ಮಾಡಿದ ವರದಿಗಳನ್ನೊಳಗೊಂಡಂತೆ ಪ್ರತಿ ಏಜೆನ್ಸಿಗೂ ಹಂಚಿಕೆ ಮಾಡಿದ ಆಯವ್ಯಯ:

ಶೀರ್ಷಿಕೆವಾರು ಅನುದಾನ ಬಿಡುಗಡೆಯಾದ ವಿವರ ಅನುಬಂಧ–4 ಲಗತ್ತಿಸಿದೆ.

**4(1) ಬಿ XII:** ಹಣ ಹಂಚಿಕೆ ಮಾಡಿ ವಿವರಗಳನ್ನೊಳಗೊಂಡಂತೆ ಕಾರ್ಯಕ್ರಮಗಳು ಫಲಾನುಭವಿಗಳ ವಿವರ ಹಾಗೂ ಸಹಾಯ ಧನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ವಿಧಾನ: 2006–07ನೇ ಸಾಲು:

| ಕ್ರ. ಸಂ. | ಯೋಜನೆ | ಬಿಡುಗಡೆಯಾದ ಅನುದಾನ | ವಿತರಿಸಿದ ಅನುದಾನ | ಫಲಾನುಭವಿಗಳ ಸಂಖ್ಯೆ | ಷರಾ |
|---|---|---|---|---|---|
| 1. | ರಾಷ್ಟ್ರೀಯ ಕುಟುಂಬ ನೆರವು ಯೋಜನೆ | ರೂ. 17.00 ಲಕ್ಷ | ರೂ. 17.00 ಲಕ್ಷ | 174 | |
| 2. | ಪ್ರಧಾನಮಂತ್ರಿಗಳ ವಿದರ್ಭಾ ಮಾದರಿ ರೈತರ ಪ್ಯಾಕೇಜ್ | ರೂ. 23.00 ಲಕ್ಷ | ರೂ. 23.00 ಲಕ್ಷ | 230 | |

**4(1) ಬಿ XIII:** ರಿಯಾಯಿತಿಗಳು, ಅಪ್ಪಣೆ ಪತ್ರಗಳು ಅಥವಾ ಅಧಿಕಾರ ಪತ್ರಗಳನ್ನು ಪಡೆದವರ ವಿವರಗಳು:

ಯಾವುದೇ ರಿಯಾಯಿತಿಗಳು, ಅಪ್ಪಣೆ ಪತ್ರಗಳನ್ನು ಈ ಪ್ರಾಧಿಕಾರದಿಂದ ಮಂಜೂರು ಮಾಡಿರುವುದಿಲ್ಲ.

**4(1) ಬಿ XVI:** ಉಪವಿಭಾಗದಲ್ಲಿ ದೊರೆಯುವ ಅಥವಾ ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಇಳಿಸಿರುವ ಮಾಹಿತಿಗಳ ವಿವರಗಳು: ಯಾವುದೂ ಇರುವುದಿಲ್ಲ.

**4(1) ಬಿ XV:** ಗ್ರಂಥಾಲಯವನ್ನು ಸಾರ್ವಜನಿಕರ ಬಳಕೆಗೆ ನಿರ್ವಹಿಸಿದ್ದಲ್ಲಿ, ಗಂಥಾಲಯವು ಅಥವಾ ವಾಚನಾಲಯವು ಕಾರ್ಯನಿರ್ವಹಿಸುವ ಸಮಯ ಹಾಗೂ ಸಾರ್ವಜನಿಕರಿಗೆ ಮಾಹಿತಿಯನ್ನು ಪಡೆಯಲು ಇರುವ ಅನುಕೂಲತೆಗಳ ವಿವರಗಳು:

ಸಾರ್ವಜನಿಕರ ಬಳಕೆಗೆ ಗಂಥಾಲಯ ನಿರ್ವಹಿಸಿಲ್ಲ.

**4(1) ಬಿ XVI:** ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು, ಪದನಾಮ ಮತ್ತು ಇತರೆ ವಿವರಗಳು.

| ಕ್ರ. ಸಂ. | ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು: | ಪದನಾಮ | ದೂರವಾಣಿ ಸಂಖ್ಯೆ | |
|---|---|---|---|---|
| | | | ಕಛೇರಿ | ನಿವಾಸ |
| 1. | ಶೀ ಎಂ.ಕೆ.ಶ್ರೀರಂಗಯ್ಯ, ಕೆ.ಎ.ಎಸ್. | ಉಪವಿಭಾಗಾಧಿಕಾರಿ ಮತ್ತು ಉಪವಿಭಾಗೀಯ ದಂಡಾಧಿಕಾರಿ, ಸಾಗರ ಉಪವಿಭಾಗ, ಸಾಗರ ಮೊಬೈಲ್ ನಂ. 9448220262 | 08183–226601 | 08183–226602 |

**ಅನುಬಂಧ – 1ಎ:**

**ಉಪವಿಭಾಗಾಧಿಕಾರಿಗಳ ಕಛೇರಿಯ ಸಂಘಟನೆಯ ವಿವರ:**

| ಕ್ರ. ಸಂ. | ವಿಷಯ ನಿರ್ವಾಹಕರ ಹೆಸರು & ಪದನಾಮ: ಶ್ರೀಯುತರುಗಳಾದ: | ವಹಿಸಲಾದ ವಿಷಯಗಳು |
|---|---|---|
| 1. | ಎಂ.ಕೆ.ಶ್ರೀರಂಗಯ್ಯ, ಕೆ.ಎ.ಎಸ್., ಉಪವಿಭಾಗಾದಿಕಾರಿ | 1. ಉಪವಿಭಾಗದ ಸಾಮಾನ್ಯ ಆಡಳಿತ ನಿರ್ವಹಣೆ<br>2. ಕಾನೂನು ಸುವ್ಯವಸ್ಥೆ ಕಾಪಾಡುವುದು<br>3. ಉಪವಿಭಾಗೀಯ ದಂಡಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು<br>4. ಕಂದಾಯ ನ್ಯಾಯಾಲಯದ ಮೇಲ್ಮನವಿ ಪ್ರಕರಣಗಳ ವಿಲೇವಾರಿ<br>5. ಸಾರ್ವಜನಿಕ ಕುಂದುಕೊರತೆ ನಿವಾರಣೆ<br>6. ಭೂ ಸ್ವಾಧೀನ ಪಕರಣಗಳ ನಡವಳಿಕೆ ನಡೆಸುವುದು<br>7. ಪಿ.ಟಿ.ಸಿ.ಎಲ್. ಪಕರಣಗಳ ವಿಲೇವಾರಿ<br>8. ಚುನಾವಣಾ ಕೆಲಸ ಕಾರ್ಯಗಳ ನಿರ್ವಹಣೆ ಹಾಗೂ ಮೇಲ್ವಿಚಾರಣೆ<br>9. ಸಾಗರ ಹಾಗೂ ಹೊಸನಗರ ತಾಲ್ಲೂಕಿನ ಭೂ ನ್ಯಾಯ ಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವುದು<br>10. ಕಲಂ 77ರಡಿ ಸಲ್ಲಿಸಿದ 7ಎ ಅರ್ಜಿ ವಿಲೇವಾರಿ<br>11. ಕರ್ನಾಟಕ ಮುನ್ಸಿಪಲ್ ಕಾಯ್ದೆ ಕಲಂ 306(1)ರಡಿ ಪ್ರಕರಣಗಳ ವಿಲೇವಾರಿ<br>12. ಉಪವಿಭಾಗದ ಸಾಗರ, ಸೊರಬ, ಶಿಕಾರಿಪುರ ಹಾಗೂ ಹೊಸನಗರ ತಾಲ್ಲೂಕುಗಳ ರೈತರ ಆತ್ಮಹತ್ಯೆ ತಾಲ್ಲೂಕು ಸಮಿತಿ ಅಧ್ಯಕ್ಷರಾಗಿ ಕಾರ್ಯನಿರ್ವಹಣೆ.<br>13. ಸಾಗರ ನಗರ ಸಭೆಯ ಆಡಳಿತಾಧಿಕಾರಿ ಕಾರ್ಯನಿರ್ವಹಣೆ<br>14. ಪ್ರಧಾನಮಂತ್ರಿಗಳ ವಿದರ್ಭಾ ಮಾದರಿ ರೈತರ ಪ್ಯಾಕೇಜ್ ಅಡಿ ಉಪವಿಭಾಗದ ವ್ಯಾಪ್ತಿಯ ತಾಲ್ಲೂಕುಮಟ್ಟದಲ್ಲಿ ಶಿಫಾರಸ್ಸು ಮಾಡಲಾದ ರೈತರುಗಳಿಗೆ ಧನಸಹಾಯ ಬಿಡುಗಡೆ ಕಾರ್ಯ |

| ಕ್ರ. ಸಂ. | ವಿಷಯ ನಿರ್ವಾಹಕರ ಹೆಸರು & ಪದನಾಮ: ಶ್ರೀಯುತರುಗಳಾದ: | ವಹಿಸಲಾದ ವಿಷಯಗಳು |
|---|---|---|
| 2. | ಕೆ.ಎಸ್.ಜ್ಞಾನಪ್ಪ, ವ್ಯವಸ್ಥಾಪಕರು | 1. ಆಡಳಿತ ಶಾಖೆ<br>2. ಸಾರ್ವಜನಿಕ ಕುಂದು ಕೊರತೆ<br>3. ಮಾಹಿತಿ ಹಕ್ಕು ಅದಿನಿಯಮ ಶಾಖೆ |
| 3. | ಜಿ.ಕೃಷ್ಣಪ್ಪ, ಪ್ರ.ದ.ಸ. | 1. ಸಿಬ್ಬಂದಿ ಶಾಖೆ<br>2. ಶಿಸ್ತು ಪ್ರಕರಣಗಳು<br>3. ವೇತನ ಬಿಲ್ ತಯಾರಿಸುವುದು<br>4. ಅಧೀನ ಕಛೇರಿಗಳ ಸಿಬ್ಬಂದಿ ಶಾಖೆಯ ಪ್ರಕರಣಗಳ ವಿಲೇವಾರಿ<br>5. ಪ್ರಯಾಣ ಭತ್ಯೆ ಬಿಲ್ ಗಳ ನಿರ್ವಹಣೆ<br>6. ಡಿ.ಸಿ ಬಿಲ್‌ಗಳ ನಿರ್ವಹಣೆ<br>7. ವಾಹನದ ಲಾಗ್ ಪುಸ್ತಕ ನಿರ್ವಹಣೆ |
| 4. | ಎಂ.ನಾರಾಯಣ, ಪ್ರ.ದ.ಸ. | 1. ರಾಷ್ಟ್ರೀಯ ಕುಟುಂಬ ನೆರವು ಯೋಜನೆ<br>2. ನೀರಾವರಿ ಶಾಖೆ<br>3. ಆಹಾರ ಮತ್ತು ನಾಗರೀಕ ಸರಬರಾಜು<br>4. ಆಶ್ರಯ<br>5. ವಿಫಲ ಬಾವಿ<br>6. ರೈತರ ವಿದರ್ಭ ಮಾದರಿ ಪ್ಯಾಕೇಜ್<br>7. ಜೀತ ವಿಮುಕ್ತಿ |
| 5. | ಎನ್.ಕೃಷ್ಣಮೂರ್ತಿ, ಪ್ರ.ದ.ಸ. | 1. ಚುನಾವಣೆ ವಿಷಯಗಳು<br>2. ಮುಜರಾಯಿ ಪ್ರಕರಣಗಳು<br>3. ಅನುವಂಶಿಕ ಕಾಯ್ದೆ ರದ್ಧಿಯಾತಿ ಪ್ರಕರಣಗಳು<br>4. ಇನಾಂ ಪ್ರಕರಣಗಳು<br>5. ಪುರಸಭೆ<br>6. ಅಧೀನ ಕಛೇರಿಗಳ ತಪಾಸಣೆ ಟಿಪ್ಪಣಿ ತಯಾರಿಕೆ<br>7. ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನದ ಕಾಮಗಾರಿಗಳು<br>8. ಬಾಲ ಕಾರ್ಮಿಕರ ಪ್ರಕರಣಗಳು |
| 6. | ಎಲ್.ಬಿ.ಚಂದ್ರಶೇಖರ್, ಪ್ರ.ದ.ಸ. | 1. ಭೂ ಸ್ವಾಧೀನ ಪ್ರಕರಣಗಳು<br>2. ಕಂದಾಯ ಮೇಲ್ಮನವಿ ಪ್ರಕರಣಗಳು<br>3. ಹಕ್ಕು ದಾಖಲೆ<br>4. ಅರಣ್ಯ ಪ್ರಕರಣಗಳು<br>5. ಅಭಿಲೇಖಾಲಯ<br>6. ನಕಲು ವಹಿ |
| 7. | ಟಿ.ಪರಮೇಶ್ವರ, ದ್ವಿ.ದ.ಸ. (ನಿಯೋಜನೆ ಮೇರೆ) | 1. ನ್ಯಾಯಾಂಗ ಶಾಖೆ<br>2. ಅಸ್ವಾಭಾವಿಕ ಮರಣ ಪ್ರಕರಣಗಳು<br>3. ಭೂಮಿ ಶಾಖೆ<br>4. ಪಿ.ಟಿ.ಸಿ.ಎಲ್. ಪ್ರಕರಣಗಳು<br>5. ಭೂ ಸುಧಾರಣೆ<br>6. 79ಎ & ಬಿ (ಭೂ ಸುಧಾರಣೆ)<br>7. ಇತರೆ ವಿಷಯ ವಹಿ<br>8. ಬರಗಾಲ ಕಾಮಗಾರಿಗಳು<br>9. ಮಾಹಿತಿ ಹಕ್ಕು ಅಧಿನಿಯಮದನ್ವಯ ದಾಖಲೆಗಳನ್ನು ಸಾರ್ವಜನಿಕರಿಗೆ ತೋರಿಸುವುದು |

| ಕ್ರ. ಸಂ. | ವಿಷಯ ನಿರ್ವಾಹಕರ ಹೆಸರು & ಪದನಾಮ: ಶ್ರೀಯುತರುಗಳಾದ: | ವಹಿಸಲಾದ ವಿಷಯಗಳು |
|---|---|---|
| 8. | ಶ್ರೀಮತಿ ಮಮತಾ ಜಿ.ಶರ್ಮಾ, ದ್ವಿ.ದ.ಸ. | 1. ನೈಸರ್ಗಿಕ ವಿಕೋಪ<br>2. ಗ್ರಾಮಪಂಚಾಯ್ತಿಗಳು<br>3. ಹಕ್ಕು ದಾಖಲೆ (ಗಣಕೀಕರಣ)<br>4. ಆಮದು ಮತ್ತು ರವಾನೆ ಶಾಖೆ |
| 9. | ಬಿ.ಎಸ್.ರವೀಂದ್ರ ನಾಥ್, ಬೆರಳಚ್ಚುಗಾರ | ದೂರವಾಣಿ ಸಂದೇಶಗಳ ನಿರ್ವಹಣೆ, ನ್ಯಾಯಾಲಯದ ಆದೇಶ, ಕಛೇರಿ ಪತ್ರ ವ್ಯವಹಾರಗಳ ಗಣಕೀಕರಣ ಕಾರ್ಯ, ಉಪವಿಭಾಗಾಧಿಕಾರಿಗಳವರ ದಿನಚರಿ ಹಾಗೂ ತಾತ್ಕಾಲಿಕ ಪ್ರವಾಸ ಕಾರ್ಯಕ್ರಮಗಳ ನಿರ್ವಹಣೆ ಕಾರ್ಯ |
| 10. | ಎಂ.ಆರ್.ನರಸಿಂಹ ಮೂರ್ತಿ, ಬೆರಳಚ್ಚುಗಾರ | ಎಲ್ಲಾ ಶಾಖೆಯ ಪತ್ರ ವ್ಯವಹಾರಗಳು ಹಾಗೂ ಆದೇಶಗಳನ್ನು ಬೆರಳಚ್ಚು ಮಾಡುವುದು. |
| 11. | ಮರಿಯಪ್ಪ, ದಫೇದಾರ್ | ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು. |
| 12. | ಕೆ.ಚೌಡಪ್ಪ, ಡಿ ನೌಕರ | ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು. |
| 13. | ಎಲ್.ಮಹಾದೇವಪ್ಪ, ಡಿ ನೌಕರ | ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು. |
| 14. | ದಾನಪ್ಪ, ಬಾಂದ್ ಜವಾನ | ಹಾಲಿ ನಿಯೋಜನೆ ಮೇರೆಗೆ ಹೊಸನಗರ ತಾಲ್ಲೂಕ್ ಕೆರೆಹಳ್ಳಿ ಹೋಬಳಿ ರಾಜಸ್ವ ನಿರೀಕ್ಷಕರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. |

**ಅನುಬಂಧ – 1 ಬಿ**

**ಪ್ರಕಾರ್ಯಗಳು ಮತ್ತು ಕರ್ತವ್ಯಗಳು**

ಉಪವಿಭಾಗಾಧಿಕಾರಿಗಳು, ಸಾಗರ ಕಂದಾಯ ಉಪವಿಭಾಗದ ಮೇಲ್ವಿಚಾರಕರಾಗಿದ್ದು, ಅವರ ಅಧೀನದಲ್ಲಿ ಕೆಳಕಂಡ ಶಾಖೆಗಳು ಕಾರ್ಯನಿರ್ವಹಿಸುತ್ತವೆ.

ಸಾಗರ ಉಪವಿಬಾಗಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶಾಖೆಗಳ ವಿವರಗಳು:

| ಕ್ರ.ಸಂ. | ಶಾಖೆಗಳು | ಕಾರ್ಯನಿರ್ವಹಣೆ |
|---|---|---|
| 1. | ಹಕ್ಕು ದಾಖಲೆ | ಜಮೀನಿನ ಖಾತೆ ಬದಲಾವಣೆ ಬಗ್ಗೆ ವ್ಯವಹರಿಸಲಾಗುತ್ತದೆ. |
| | ಭೂ ಕಂದಾಯ | ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 49,136(2)ರಡಿ ಬರುವ |
| 2. | ಮೇಲ್ಮನವಿ | ಮೇಲ್ಮನವಿಗೆ ಸಂಬಂದಿಸಿದಂತೆ ಮೇಲ್ಮನವಿ ವಿಚಾರಣೆಗೆ ನಿಗಧಿಸುವ ಪೂರ್ವದಲ್ಲಿ ಪತ್ರ ವ್ಯವಹಾರ ಹಾಗೂ ಕೋರ್ಟ್ ನಡವಳಿಕೆಗಳು |
| 3. | ಹ.ದಾ. ಗಣಕೀಕರಣ | ತಾಲ್ಲೂಕ್ ಕಛೇರಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಹಕ್ಕುದಾಖಲೆಗಳಿಗೆ ಸಂಬಂಧಿಸಿದಂತೆ ಪತ್ರವ್ಯವಹಾರ ನಡೆಸುವುದು. |
| 4. | ಪಿ.ಟಿ.ಸಿ.ಎಲ್. | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ಮಂಜೂರಾದ ಜಮೀನು ಪರಭಾರೆ ನಿಷೇಧ ನಿಬಂಧನೆ ಉಲ್ಲಂಘಿಸಿ ಕ್ರಯವಾದ ಬಗ್ಗೆ ಕ್ರಮವಹಿಸುವುದು. |
| 5. | ಚುನಾವಣೆ | ಉಪವಿಭಾಗ ಮಟ್ಟದಲ್ಲಿ ಚುನಾವಣೆ ನಡೆಸುವುದು. |
| 6. | ಇನಾಂ ಶಾಖೆ | ಇನಾಂ ಜಮೀನುಗಳಿಗೆ ಸಂಬಂಧಿಸಿದಂತೆ ಪತ್ರ ವ್ಯವಹಾರ. |
| 7. | ಜೀತ | ಜೀತದಾಳುಗಳಾಗಿರುವವರನ್ನು ಜೀತದಿಂದ ಮುಕ್ತಗೊಳಿಸುವ ಕಾರ್ಯನಿರ್ವಹಣೆ. |
| 8. | ಬಾಲ ಕಾರ್ಮಿಕ | 14 ವರ್ಷದೊಳಗಿನ ಮಕ್ಕಳು ಕೂಲಿ ಮಾಡುವುದನ್ನು ತಡೆಗಟ್ಟುವುದು |
| 9. | ನ್ಯಾಯಾಂಗ ಶಾಖೆ | ಸಿ.ಆರ್.ಪಿ.ಸಿ. ಅಡಿ ಕ್ರಮಜರುಗಿಸುವುದು. |
| 10. | ಎಂಟರ್ಟೈನ್‌ಮೆಂಟ್ | ಮನರಂಜನಾ ಕಾಯ್ದೆ ಅಡಿ ಕ್ರಮ |
| 11. | ಭೂ ಸ್ವಾಧೀನ | ಸಾರ್ವಜನಿಕ ಉದ್ದೇಶಕ್ಕಾಗಿ ಹಿಡುವಳಿ ಜಮೀನು ಭೂ ಸ್ವಾಧೀನ ಪ್ರಕ್ರಿಯೆ ಹಾಗೂ ಪರಿಹಾರ ಪಾವತಿ ಕ್ರಮ |
| 12. | ಸಾರ್ವಜನಿಕ ಕುಂದುಕೊರತೆ | ಸಾರ್ವಜನಿಕ ಕುಂದು ಕೊರತೆ ನಿವಾರಣೆ |
| 13. | ಆಶ್ರಯ | ಖಾಸಗಿ ಜಮೀನು, ನಿವೇಶನ ವಿತರಣೆಗಾಗಿ ಖರೀದಿಸುವ ಪ್ರಕ್ರಿಯೆ |
| 14. | ನೀರಾವರಿ | ನೀರಾವರಿ ಸಲಹಾ ಸಮಿತಿ ನಡೆಸುವುದು, ನೀರಿನ ತೆರಿಗೆ, ನಿರ್ವಹಣಾ ತೆರಿಗೆ ವಸೂಲಿ |

| ಕ್ರ.ಸಂ. | ಶಾಖೆಗಳು | ಕಾರ್ಯನಿರ್ವಹಣೆ |
|---|---|---|
| 15. | ವಿಫಲ ಬಾವಿ | ಸರ್ಕಾರದ ವತಿಯಿಂದ ಸಾಲ ಪಡೆದು ನಿರ್ಮಿಸಿದ ತೆರೆದ ಬಾವಿ ವಿಫಲಗೊಂಡ ಕುರಿತು ಸ್ಥಳ ತನಿಖೆ ಮಾಡಿ ವರದಿ ಸಲ್ಲಿಸುವುದು. |
| 16. | ತಾಲ್ಲೂಕ್ ಪಂಚಾಯತ್ | ತಾಲ್ಲೂಕ್ ಪಂಚಾಯತ್‌ಗಳ ಅಧ್ಯಕ್ಷರ / ಉಪಾಧ್ಯಕ್ಷರ ಚುನಾವಣೆ ಹಾಗೂ ಅವಿಶ್ವಾಸ ಮಂಡನಾ ಸಭೆ ನಡೆಸುವುದು. |
| 17. | ಗ್ರಾಮ ಪಂಚಾಯತ್ | ಗ್ರಾಮ ಪಂಚಾಯ್ತಿಗಳ ಅಧ್ಯಕ್ಷ / ಉಪಾಧ್ಯಕ್ಷರ ಚುನಾವಣೆ ಹಾಗೂ ಅವಿಶ್ವಾಸ ಮಂಡನೆ ಸಭೆ ನಡೆಸುವುದು. |
| 18. | ನೈಸರ್ಗಿಕ ವಿಕೋಪ | ಬೆಂಕಿ ಆಕಸ್ಮಿಕ, ಪ್ರವಾಹ, ಹಾಗೂ ನೈಸರ್ಗಿಕ ವಿಕೋಪದಿಂದುಂಟಾಗುವ ಪ್ರಾಣ ಹಾನಿ, ಪ್ರಾಣಿ ಹಾನಿ ಹಾಗೂ ಬೆಳೆ ಹಾನಿ ಸಂಬಂಧ ಪರಿಹಾರ ಮಂಜೂರಾತಿ ಕ್ರಮ. |
| 19. | ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ | ಸಂಸತ್ಸದಸ್ಯರು ಹಾಗೂ ವಿಧಾನಪರಿಷತ್ ಸದಸ್ಯರ ವಿವೇಚನಾ ಕೋಟಾದಡಿ ನೀಡಲಾದ ಕಾಮಗಾರಿಗಳ ಪರಿಶೀಲನೆ ಮಾಡಿ ದೃಢೀಕರಿಸಿ ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡುವುದು. |
| 20. | ಆಡಳಿತ | ಸಾಮಾನ್ಯ ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಕ್ರಮವಹಿಸುವುದು. |
| 21. | ಗಣಿಗಾರಿಕೆ | ಗಣಿಗಾರಿಕೆ ಸಂಬಂಧ ಅನುಮತಿ ಕುರಿತು ಸ್ಥಳ ತನಿಖೆ ಮಾಡಿ ವರದಿ ಸಲ್ಲಿಕೆ ಹಾಗೂ ಅನಧಿಕೃತ ಗಣಿಗಾರಿಕೆ ತಡೆಗಟ್ಟುವಿಕೆ ಕ್ರಮಕೈಗೊಳ್ಳುವುದು. |
| 22. | ಇತರೆ (ಮಿಸ್.) | ಕಂದಾಯ ಇಲಾಖೆ ಹೊರತುಪಡಿಸಿ ಇತರೆ ಇಲಾಖೆಗಳಿಗೆ ಸಂಬಂಧಿಸಿದ ವಿಷಯಗಳಿಗೆ ಪತ್ರ ವ್ಯವಹಾರ. |
| 23. | ಆಹಾರ ಶಾಖೆ | ಪಡಿತರ ಚೀಟಿ ವಿತರಣೆ, ಸಾರ್ವಜನಿಕರಿಗೆ ಆಹಾರ ವಿತರಣೆ ಹಾಗೂ ಅಗತ್ಯವಸ್ತುಗಳ ಕಾಯ್ದೆಯಡಿ ದಾಖಲಾದ ಪ್ರಕರಣಗಳ ನಿರ್ವಹಣೆ. |
| 24. | ಸ್ವಾ.ಹೋ.ಪಿಂಚಣಿ | ಸ್ವಾತಂತ್ರ್ಯಹೋರಾಟಗಾರರ ನಿವೃತ್ತಿವೇತನದಾರರಿಗೆ ಸಂಬಂಧಿಸಿದಂತೆ ಪತ್ರವ್ಯವಹಾರ. |
| 25. | ಅರಣ್ಯ | ಹಿಡುವಳಿ ಜಮೀನುಗಳಲ್ಲಿ ಮರಕಡಿತಲೆ ಸಂಬಂಧ ಸ್ಥಳ ಪರಿಶೀಲಿಸಿ ಶಿಫಾರಸ್ಸು ಮಾಡುವುದು. |
| 26. | ಪುರಸಭೆ | ಪುರಸಭೆ ಹಾಗೂ ಪಟ್ಟಣ ಪಂಚಾಯ್ತಿಗೆ ಸಂಬಂಧಪಟ್ಟಂತೆ ಪತ್ರ ವ್ಯವಹಾರ. ಕರ್ನಾಟಕ ಪುರಸಭೆ ಅಧಿನಿಯಮ 1964 ಕಲಂ 301(1)ರಡಿ ಮೇಲ್ಮನವಿ ವಿಚಾರಣೆ. |
| 27. | ದರಖಾಸ್ತು | ಸರ್ಕಾರಿ ಜಮೀನು ಮಂಜೂರಾತಿ ಬಗ್ಗೆ ಕ್ರಮವಹಿಸುವುದು. |
| 28. | ಭೂ ಸುಧಾರಣೆ | ಭೂ ಸುಧಾರಣಾ ಕಾಯ್ದೆಯಡಿ ಭೂ ನ್ಯಾಯ ಮಂಡಳಿಗೆ ಸಂಬಂಧಿಸಿದಂತೆ 7ಎ ಅರ್ಜಿಗಳ ಬಗ್ಗೆ ಮತ್ತು ಕಲಂ 79ಎ, 79ಬಿ, 80 ಹಾಗೂ 83 ಅಡಿ ಕ್ರಮವಹಿಸುವುದು.. |
| 29. | ಸಿಬ್ಬಂದಿ ಶಾಖೆ | ಕಛೇರಿ ಸಿಬ್ಬಂದಿಗಳ ಸೇವಾ ವಹಿ ಹಾಗೂ ಉಪವಿಭಾಗದ ಎಲ್ಲಾ ತಾಲ್ಲೂಕುಗಳ ಕಂದಾಯ ಸಿಬ್ಬಂಧಿಗಳ ವಿಷಯ ನಿರ್ವಹಣೆ. ಶಿಸ್ತು ಪ್ರಕರಣಗಳ ನಿರ್ವಹಣೆ. |
| 30. | ರಾ.ಕು.ಪ. | ರಾಷ್ಟ್ರೀಯ ಕುಟುಂಬ ಪರಿಹಾರ ಯೋಜನೆಯಡಿ ಪರಿಹಾರ ಮಂಜೂರಾತಿ |
| 31. | ಹಣಕಾಸು | ಡಿ.ಸಿ.ಬಿಲ್, ವೈದ್ಯಕೀಯ ವೆಚ್ಚ ಮರುಪಾವತಿ ಬಿಲ್ ಹಾಗೂ ಪ್ರಯಾಣ ಭತ್ಯೆ ಬಿಲ್‌ಗಳ ನಗದೀಕರಣ, ಮೇಲುರುಜು ಕಾರ್ಯನಿರ್ವಹಣೆ. |
| 32. | ಮುಜರಾಯಿ | ಮುಜರಾಯಿ ದೇವಾಲಯಗಳಿಗೆ, ಅಧಿಸೂಚಿತ ಸಂಸ್ಥೆಗಳ ಸಂಬಂಧ ವಿಷಯ ನಿರ್ವಹಣೆ. |
| 33. | ಸರ್ಕಾರಿ ಬಾಕಿ | ಭೂ ಕಂದಾಯ, ನೀರಿನ ತೆರಿಗೆ ಮತ್ತು ನಿರ್ವಹಣಾ ತೆರಿಗೆ, ಬ್ಯಾಂಕ್ ಸಾಲ, ಮಿಸಲೇನಿಯಸ್ ರಿಕವರಿ ವಸೂಲಾತಿ ಬಗ್ಗೆ ಕ್ರಮವಹಿಸುವುದು. |
| 34. | ಅಭಿಲೇಖಾಯ | ವಿಲೇವಾರಿಯಾದ ಕಡತಗಳ ನಿರ್ವಹಣೆ ಹಾಗೂ ದಾಖಲೆಗಳ ನಕಲು ನೀಡುವಿಕೆ. |
| 35. | ಅಕ್ಷರ ದಾಸೋಹ | ಅಕ್ಷರ ದಾಸೋಹಕ್ಕೆ ಸಂಬಂಧಿಸಿದಂತೆ ಪತ್ರ ವ್ಯವಹಾರ. |

**ಅನುಬಂಧ – 2**

**ಸಾಗರ ಉಪವಿಭಾಗಾಧಿಕಾರಿಗಳ ಕಛೇರಿಯ ಅಧಿಕಾರಿ ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳು**

| ಕ್ರ.ಸಂ. | ಹುದ್ದೆಯ ಹೆಸರು | ಅಧಿಕಾರ ಮತ್ತು ಕರ್ತವ್ಯಗಳು |
|---|---|---|
| 1. | ಉಪವಿಭಾಗಾಧಿಕಾರಿ ಹಾಗೂ ಉಪವಿಭಾಗೀಯ ದಂಡಾಧಿಕಾರಿ, ಸಾಗರ ಉಪವಿಭಾಗ, ಸಾಗರ | 1) ಉಪವಿಭಾಗದ ಸಾಮಾನ್ಯ ಆಡಳಿತ ನಿರ್ವಹಣೆ<br>2) ಕಾನೂನು ಸುವ್ಯವಸ್ಥೆ ಕಾಪಾಡುವುದು<br>3) ಉಪವಿಭಾಗೀಯ ದಂಡಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು<br>4) ಕಂದಾಯ ನ್ಯಾಯಾಲಯದ ಮೇಲ್ಮನವಿ ಪ್ರಕರಣಗಳ ವಿಲೇವಾರಿ<br>5) ಸಾರ್ವಜನಿಕ ಕುಂದುಕೊರತೆ ನಿವಾರಣೆ<br>6) ಭೂ ಸ್ವಾಧೀನ ಪ್ರಕರಣಗಳ ನಡವಳಿಕೆ ನಡೆಸುವುದು<br>7) ಪಿ.ಟಿ.ಸಿ.ಎಲ್. ಪ್ರಕರಣಗಳ ವಿಲೇವಾರಿ<br>8) ಚುನಾವಣಾ ಕೆಲಸ ಕಾರ್ಯಗಳ ನಿರ್ವಹಣೆ ಹಾಗೂ ಮೇಲ್ವಿಚಾರಣೆ<br>9) ಸಾಗರ ಹಾಗೂ ಹೊಸನಗರ ತಾಲ್ಲೂಕಿನ ಭೂ ನ್ಯಾಯ ಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವುದು<br>10) ಕಲಂ 77ರಡಿ ಸಲ್ಲಿಸಿದ 7ಎ ಅರ್ಜಿ ವಿಲೇವಾರಿ<br>11) ಕರ್ನಾಟಕ ಮುನ್ಸಿಪಲ್ ಕಾಯ್ದೆ ಕಲಂ 306(1)ರಡಿ ಪ್ರಕರಣಗಳ ವಿಲೇವಾರಿ<br>12) ಉಪವಿಭಾಗದ ಸಾಗರ, ಸೊರಬ, ಶಿಕಾರಿಪುರ ಹಾಗೂ ಹೊಸನಗರ ತಾಲ್ಲೂಕುಗಳ ರೈತರ ಆತ್ಮಹತ್ಯೆ ತಾಲ್ಲೂಕು ಸಮಿತಿ ಅಧ್ಯಕ್ಷರಾಗಿ ಕಾರ್ಯನಿರ್ವಹಣೆ.<br>13) ಸಾಗರ ನಗರ ಸಭೆಯ ಆಡಳಿತಾಧಿಕಾರಿ ಕಾರ್ಯನಿರ್ವಹಣೆ<br>14) ಪ್ರಧಾನಮಂತ್ರಿಗಳ ವಿದರ್ಭಾ ಮಾದರಿ ರೈತರ ಪ್ಯಾಕೇಜ್ ಅಡಿ ಉಪವಿಭಾಗದ ವ್ಯಾಪ್ತಿಯ ತಾಲ್ಲೂಕುಮಟ್ಟದಲ್ಲಿ ಶಿಫಾರಸ್ಸು ಮಾಡಲಾದ ರೈತರುಗಳಿಗೆ ಧನಸಹಾಯ ಬಿಡುಗಡೆ ಕಾರ್ಯ. |
| 2. | **ವ್ಯವಸ್ಥಾಪಕರು** | 1) ಆಡಳಿತ ಶಾಖೆ<br>2) ಸಾರ್ವಜನಿಕ ಕುಂದು ಕೊರತೆ<br>3) ಮಾಹಿತಿ ಹಕ್ಕು ಅಧಿನಿಯಮ ಶಾಖೆ |
| 3. | ಪ್ರಥಮ ದರ್ಜೆ ಸಹಾಯಕರು | ಅವರಿಗೆ ವಹಿಸಿದ ಶಾಖೆಗಳ ನಿರ್ವಹಣೆ |
| 4. | ದ್ವಿತೀಯ ದರ್ಜೆ ಸಹಾಯಕರು | ಅವರಿಗೆ ವಹಿಸಿದ ಶಾಖೆಗಳ ನಿರ್ವಹಣೆ |
| 5. | ಬೆರಳಚ್ಚುಗಾರರು (ಶೀಘ್ರಲಿಪಿಗಾರರ ಹುದ್ದೆ) | ದೂರವಾಣಿ ಸಂದೇಶಗಳ ನಿರ್ವಹಣೆ, ನ್ಯಾಯಾಲಯದ ಆದೇಶ, ಕಛೇರಿ ಪತ್ರವ್ಯವಹಾರಗಳ ಗಣಕೀಕರಣ ಕಾರ್ಯ,ಉಪವಿಭಾಗಾಧಿಕಾರಿಗಳ ದಿನಚರಿ ಹಾಗೂ ತಾತ್ಕಾಲಿಕ ಪ್ರವಾಸ ಕಾರ್ಯಕ್ರಮಗಳ ನಿರ್ವಹಣೆ ಕಾರ್ಯ |
| 6. | ಬೆರಳಚ್ಚುಗಾರರು | ಎಲ್ಲಾ ಶಾಖೆಗಳ ಬೆರಳಚ್ಚು ಕಾರ್ಯ ಮತ್ತು ನ್ಯಾಯಾಲಯದ ಆದೇಶಗಳ ಬೆರಳಚ್ಚು ಕಾರ್ಯ. |
| 7. | ವಾಹನ ಚಾಲಕರು | ಕಛೇರಿ ವಾಹನ ನಿರ್ವಹಣೆ ಹಾಗೂ ಚಾಲನೆ. |
| 8. | ದಫೇದಾರ್ | ಅವರಿಗೆ ವಹಿಸಿದ ಕಾರ್ಯಗಳನ್ನು ಆಯಾ ದಿನದಂದೇ ನಿರ್ವಹಿಸುವುದು. |
| 9. | ಡಿ ಗ್ರೂಪ್ ನೌಕರರು | ಅವರಿಗೆ ವಹಿಸಿದ ಕಾರ್ಯಗಳನ್ನು ಆಯಾ ದಿನದಂದೇ ನಿರ್ವಹಿಸುವುದು. |

**ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ / ನೌಕರರ ದೂರವಾಣಿ ಸಂಖ್ಯೆಗಳು**

| ಕ್ರ. ಸಂ. | ಹೆಸರು ಶ್ರೀಯುತರುಗಳಾದ: | ಪದನಾಮ | ಮನೆ ನಂಬರು 08183 | ಮೊಬೈಲ್ ನಂಬರ್ |
|---|---|---|---|---|
| 1. | ಎಂ.ಕೆ.ಶ್ರೀರಂಗಯ್ಯ, ಕೆ.ಎ.ಎಸ್. | ಉಪವಿಭಾಗಾಧಿಕಾರಿ | 226602 | 9448220262 |
| 2. | ಕೆ.ಎಸ್.ಜ್ಞಾನಪ್ಪ | ವ್ಯವಸ್ಥಾಪಕರು | 221669 | |
| 3. | ಎಲ್.ಬಿ.ಚಂದ್ರಶೇಖರ | ಪ್ರ.ದ.ಸ. | 253543 | |
| 4. | ಜಿ.ಕೃಷ್ಣಪ್ಪ | ಪ್ರ.ದ.ಸ. | | |
| 5. | ಎನ್.ಕೃಷ್ಣಮೂರ್ತಿ | ಪ್ರ.ದ.ಸ. | 253668 | 9449812668 |

| ಕ್ರ. ಸಂ. | ಹೆಸರು ಶ್ರೀಯುತರುಗಳಾದ: | ಪದನಾಮ | ಮನೆ ನಂಬರು 08183 | ಮೊಬೈಲ್ ನಂಬರ್ |
|---|---|---|---|---|
| 6. | ಎಂ.ನಾರಾಯಣ | ಪ್ರ.ದ.ಸ. | 226861 | |
| 7. | ಟಿ.ಪರಮೇಶ್ವರ (ನಿಯೋಜನೆ ಮೇರೆ) | ದ್ವಿ.ದ.ಸ. | | 9449028962 |
| 8. | ಮಮತಾ ಜಿ.ಶರ್ಮಾ | ದ್ವಿ.ದ.ಸ. | 227840 | |
| 9. | ಬಿ.ಎಸ್.ರವೀಂದ್ರನಾಥ್ | ಬೆರಳಚ್ಚುಗಾರ | 296464 | 9449080160 |
| 10. | ಎಂ.ಆರ್.ನರಸಿಂಹಮೂರ್ತಿ | ಬೆರಳಚ್ಚುಗಾರ | 221074 | |
| 11. | ಮೇಘ್ಯಾನಾಯ್ಕ್ | ವಾಹನ ಚಾಲಕ | | 9480431836 |
| 12. | ಮರಿಯಪ್ಪ | ದಫೇದಾರ್ | 296150 | |
| 13. | ಕೆ.ಚೌಡಪ್ಪ | ಡಿ ಗ್ರೂಪ್ | | |
| 14. | ಎಲ್.ಮಹಾದೇವಪ್ಪ | ಡಿ ಗ್ರೂಪ್ | 226665 | |
| 15. | ದಾನಪ್ಪ | ಬಾಂದ್ ಜವಾನ | | |

**ಅನುಬಂಧ – 3**

**ಅಧಿಕಾರಿಗಳು ಹಾಗೂ ನೌಕರರು ಪಡೆಯುತ್ತಿರುವ ಮಾಸಿಕ ವೇತನದ ವಿವರಗಳು**

| ಕ್ರ.ಸಂ. | ಹೆಸರು ಶ್ರೀಯುತರುಗಳಾದ: | ಪದನಾಮ | ನಿವ್ವಳ ಸಂಬಳ ರೂ. |
|---|---|---|---|
| | **ಲೆಕ್ಕ ಶೀರ್ಷಿಕೆ: 2053 ಜಿಲ್ಲಾ ಆಡಳಿತ:** | | |
| 1. | ಎಂ.ಕೆ.ಶ್ರೀರಂಗಯ್ಯ, ಕೆ.ಎ.ಎಸ್. | ಉಪವಿಭಾಗಾಧಿಕಾರಿ | 15,920/– |
| 2. | ಕೆ.ಎಸ್.ಜ್ಞಾನಪ್ಪ | ವ್ಯವಸ್ಥಾಪಕರು | 11,573/– |
| 3. | ಎಲ್.ಬಿ.ಚಂದ್ರಶೇಖರ | ಪ್ರ.ದ.ಸ. | 7,688/– |
| 4. | ಜಿ.ಕೃಷ್ಣಪ್ಪ | ಪ್ರ.ದ.ಸ. | 8,338/– |
| 5. | ಎಂ.ನಾರಾಯಣ | ಪ್ರ.ದ.ಸ. | 7,076/– |
| 6. | ಕಲ್ಲಪ್ಪ ಮೆಣಸಿನಾಳ್ ( ಸಾಗರ ತಾಲ್ಲೂಕ್ ಕಛೇರಿಗೆ ನಿಯೋಜನೆ) | ದ್ವಿ.ದ.ಸ. | 07,663/– |
| 7. | ಮಮತಾ ಜಿ.ಶರ್ಮಾ | ದ್ವಿ.ದ.ಸ. | 05,195/– |
| 8. | ಬಿ.ಎಸ್.ರವೀಂದ್ರನಾಥ್ | ಬೆರಳಚ್ಚುಗಾರ | 11,845/– |
| 9. | ಎಂ.ಆರ್.ನರಸಿಂಹಮೂರ್ತಿ | ಬೆರಳಚ್ಚುಗಾರ | 10,310/– |
| 10. | ಮೇಘ್ಯಾನಾಯ್ಕ್ | ವಾಹನ ಚಾಲಕ | 10,459/– |
| 11. | ಮರಿಯಪ್ಪ | ದಫೇದಾರ್ | 06,343/– |
| 12. | ಕೆ.ಚೌಡಪ್ಪ | ಡಿ ಗ್ರೂಪ್ | 06,818/– |
| 13. | ಎಲ್.ಮಹಾದೇವಪ್ಪ | ಡಿ ಗ್ರೂಪ್ | 05,331/– |
| 14. | ದಾನಪ್ಪ | ಬಾಂದ್ ಜವಾನ | 06,747/– |
| | **ಲೆಕ್ಕ ಶೀರ್ಷಿಕೆ: 2015 ಚುನಾವಣೆ:** | | |
| 15. | ಎನ್.ಕೃಷ್ಣಮೂರ್ತಿ | ಪ್ರ.ದ.ಸ. | 10,070/– |

**ಅನುಬಂಧ-4**

**2006-07ನೇ ಸಾಲಿನಲ್ಲಿ 2053-94-1-01 ಲೆಕ್ಕ ಶೀರ್ಷಿಕೆಯಡಿ ಬಿಡುಗಡೆಯಾಗಿರುವ ಅನುದಾನದ ವಿವರ:**

| ಕ್ರ. ಸಂ. | 041 ಪ್ರಯಾಣವೆಚ್ಚ ರೂ. | 051 ಸಾಮಾನ್ಯವೆಚ್ಚ ರೂ. | 052 ದೂರವಾಣಿವೆಚ್ಚ ರೂ. | 071 ಕಟ್ಟಡ ವೆಚ್ಚ ರೂ. | 195 ಸಾರಿಗೆ ವೆಚ್ಚ ರೂ. |
|---|---|---|---|---|---|
| 1. | 81,307/– | 7.000/– | 31,701/– | 4,069/– | 1,61,339/– |

**ಎಂ.ಕೆ.ಶ್ರೀರಂಗಯ್ಯ**
ಉಪವಿಭಾಗಾಧಿಕಾರಿ,
ಸಾಗರ ಉಪವಿಭಾಗ,ಸಾಗರ.

ಪಿ.ಆರ್.159

**IN THE COURT OF THE 8TH ADDITIONAL CHIEF METROPOLITAN MAGISTRATE, BANGALORE CITY**

**DATED:16TH MAY 2008**

It is here by notified for the information of the public that the under mentioned one luna super, one bajaj kB100, One Yamaha, One Kinetic honda, One K.Bajaj and One TVS50 XL, Kinetic Fride Which is in the custody of High Grounds Police Station, Bangalore City. has unclaimed shall be confiscated to the Government and disposed to law, if not claimed by the owner with proof of ownership within 3 months from the date of the publication of this notification.

| Sl.No. | CR. No | PF No. | Vehicle Tails | Vehicle |
|---|---|---|---|---|
| 1. | 665/97 | 110/98 | KA-05-S-9338<br>CH.No.96F 13044468<br>ENG.No.96F13058239 | LUNA SUPER |
| 2. | 551/98 | 139/99 | KA-04-H-2668<br>CH.No.030CF036128<br>ENG.No.E30CF036128 | KAVASAKI BAJAJ |
| 3. | 557/97 | 10/00 | KA-01-Q-1367<br>ENG.CH.No.ILI383539 | YAMAHA |
| 4. | 445/96 | 89/00 | KA-04-R-4166<br>CH.No.NIFMK675367<br>ENG.No.NIFMK668507 | KINETIC HONDA |
| 5. | 440/00 | 4/01 | CKM-8604 | KAVASAKI BAJAJ |
| 6. | 118/02 | 96/02 | KA-04-Q-262<br>CH.NO.29015312<br>ENG.NO.29015953 | KINETIC FRIDE |
| 7. | 364/03 | 53/03 | CAN-9114 | TVS-50 XL |

8th Additional Chief Metropolitan Magistrate Court,

PR-581 Bangalore.

**ಉಪವಿಭಾಗಾಧಿಕಾರಿಗಳ ಕಾರ್ಯಾಲಯ, ತುಮಕೂರು ಉಪವಿಭಾಗ, ತುಮಕೂರು**

**ಅಧಿಸೂಚನೆ**

**ಸಂಖ್ಯೆ: ಮಾ.ಹ.ಅ.ಸಂಖ್ಯೆ:53/06–07, ದಿನಾಂಕ:19ನೇ ಫೆಬ್ರವರಿ, 2008**

**ವಿಷಯ:** ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ (ಸೆಂಟ್ರಲ್ ಆಕ್ಟ್ 22/05) ಸೆಕ್ಷನ್ 4(1) ಎ ಮತ್ತು 4(1)ಬಿ ಅನುಸಾರ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಕಛೇರಿಯ ಮಾಹಿತಿಯನ್ನು ಪ್ರಕಟಿಸುವ ಬಗ್ಗೆ.

ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ (ಸೆಂಟ್ರಲ್ ಆಕ್ಟ್ 22/05) ಸೆಕ್ಷನ್ 5(1) 5(2) ಮತ್ತು 19(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಂದಾಯ ಇಲಾಖೆಗೆ ಸೇರಿದ ಉಪ ವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಕಛೇರಿಯ ವ್ಯಾಪ್ತಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರಿರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಸಾರ್ವಜನಿಕ ಮಾಹಿತಿ ಅಧಿಕಾರಿ, ಹಾಗೂ ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ಸರ್ಕಾರದಿಂದ ಸರ್ಕಾರದ ಅಧಿಸೂಚನೆ ಕಂ.ಇ.37.ವಿ.ಮ.ಕ.2005, ದಿನಾಂಕ: 12–08–2005 ನೇಮಿಸಲಾಗಿದೆ. ಹಾಗೂ ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ನಿರ್ವಹಿಸಲಾಗುತ್ತಿರುವ ಕಾರ್ಯ ವೈಖರಿಗಳನ್ನು ಕೆಳಕಂಡಂತೆ ಪ್ರಕಟಿಸಲಾಗಿದೆ.

**ಮಾಹಿತಿ ಪಡೆಯುವ ಹಕ್ಕು 2005(ಸೆಂಟ್ರಲ್ ಆಕ್ಟ್ 22/2005)ಸೆಕ್ಷನ್ 4(1)ಬಿ ರಂತೆ**
**ಸಾರ್ವಜನಿಕ ಮಾಹಿತಿಗಾಗಿ ಈ ಕೆಳಕಂಡಂತೆ ಪ್ರಕಟಿಸಿದೆ.**

**ತುಮಕೂರು ಉಪವಿಭಾಗದಲ್ಲಿ ತುಮಕೂರು, ಗುಬ್ಬಿ, ಕುಣಿಗಲ್, ಈ ಮೂರು ತಾಲ್ಲೋಕುಗಳು ಬರುತ್ತವೆ.**

1. 4(1)ಎ: ಪಟ್ಟಿ ಪ್ರಕಟಿಸಲಾಗಿದೆ.
2. 4(1)ಬಿ(1) ಕಛೇರಿಯ ವ್ಯವಸ್ಥೆ ಮತ್ತು ಕಾರ್ಯಗಳ ವಿವರ:–

**ತುಮಕೂರು ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶಾಖೆಗಳ ವಿವರಗಳು.**

| ಕ್ರ. ಸಂ | ಶಾಖೆಗಳು | ವಿವರ |
|---|---|---|
| 1 | ಹಕ್ಕು ದಾಖಲೆ | ಜಮೀನಿನ ಖಾತೆ ಬದಲಾವಣೆ ಬಗ್ಗೆ ವ್ಯವಹರಿಸಲಾಗುತ್ತದೆ. |
| 2 | ತಕರಾರು ದಂಡ | ಅನಧಿಕೃತವಾಗಿ ಸರ್ಕಾರಿ ಜಮೀನು ಒತ್ತುವರಿ ಬಗ್ಗೆ ದಂಡನೆ ತೆರವುಗೊಳಿಸುವ ಬಗ್ಗೆ. |
| 3 | ಭೂ ಪರಿವರ್ತನೆ | ಕೃಷಿಯೇತರ ಉಪಯೋಗಕ್ಕಾಗಿ ಭೂ ಪರಿವರ್ತನೆಗೆ ಅನುವರ್ತಿಸುವ ಬಗ್ಗೆ ಪತ್ರ ವ್ಯವಹಾರ, ನಿರಾಕ್ಷೇಪಣಾ ಪತ್ರ. |
| 4 | RRT.CR | ಕ.ಭೂ.ಕಂದಾಯ ಅಧಿ ನಿಯಮ ಕಲಂ 49,136(2) ರಡಿ ಬರುವ ಮೇಲ್ಮನವಿಗೆ ಸಂಬಂಧಿಸಿದಂತೆ ಮೇಲ್ಮನವಿ ವಿಚಾರಣೆಗೆ ನಿಗದಿಪಡಿಸುವ ಪೂರ್ವದಲ್ಲಿ ಪತ್ರ ವ್ಯವಹಾರ. |
| 5 | ಗಣಕೀರಣ | RTC ಗಣಕೀರಣ ಮತ್ತು MR ಗಣಕ ಯಂತ್ರದ ಮೂಲಕ ಪತ್ರ ವ್ಯವಹಾರ ಮೇಲ್ವಿಚಾರಣೆ. |
| 6 | PTCL CR | ಪ.ಜಾತಿ.ಪ.ಪಂಗಡದವರಿಗೆ ಮಂಜೂರಾದ ಜಮೀನು ಪರಭಾರೆ ನಿಷೇಧ ನಿಬಂಧನೆ ಉಲ್ಲಂಘಿಸಿ ಕ್ರಯವಾದ ಬಗ್ಗೆ ಕ್ರಮ ವಹಿಸುವುದು. |
| 7 | ಚುನಾವಣೆ | ಚುನಾವಣೆ ನಡೆಸುವ ಬಗ್ಗೆ–ಮತದಾರರ ಪಟ್ಟಿ ಪರಿಷ್ಕರಣೆ. |
| 8 | ಇನಾಂ ಶಾಖೆ | ಇನಾಂ ಜಮೀನುಗಳಿಗೆ ಸಂಬಂಧಿಸಿದಂತೆ ಪತ್ರ ವ್ಯವಹಾರ. |
| 9 | ಜೀತ | ಜೀತ ಇರುವವರನ್ನು ಜೀತದಿಂದ ಬಿಡುಗಡೆಗೊಳಿಸುವ ಸಂಬಂಧ ಕ್ರಮ ವಹಿಸುವುದು. |
| 10 | ದಂಡನಾಶಾಖೆ | CRPC ಅಡಿ ಕ್ರಮ ಜರುಗಿಸುವ ಬಗ್ಗೆ. |
| 11 | ENT | ಮನರಂಜನೆ ಕಾಯ್ದೆ ಅಡಿ ಕ್ರಮ. ಕೇಬಲ್ ನೆಟ್‌ವರ್ಕ್, ಸಿನಿಮಾ ಮಂದಿರ ತಪಾಸಣೆ. |
| 12 | ಭೂ ಸ್ವಾಧೀನ CR | ಸಾರ್ವಜನಿಕ ಉದ್ದೇಶಕ್ಕಾಗಿ ಹಿಡುವಳಿ ಜಮೀನು ಭೂಸ್ವಾಧೀನಪಡಿಸುವ ಬಗ್ಗೆ. |
| 13 | ಭೂ ಸ್ವಾಧೀನ SR | ಸಾರ್ವಜನಿಕ ಉದ್ದೇಶಕ್ಕಾಗಿ ಹಿಡುವಳಿ ಜಮೀನು ಭೂ ಸ್ವಾಧೀನ ಪಡಿಸುವ ಬಗ್ಗೆ. |
| 14 | ಪರಿಹಾರ(LAC) | ಸಾರ್ವಜನಿಕ ಉದ್ದೇಶಕ್ಕಾಗಿ ಹಿಡುವಳಿ ಜಮೀನು ಭೂ ಸ್ವಾಧೀನ ಪಡಿಸುವ ಬಗ್ಗೆ. |
| 15 | ಸಾ.ಕುಂ.ಕೊರತೆ | ಸಾರ್ವಜನಿಕ ಕುಂದು ಕೊರತೆ ನಿವಾರಣೆ ಬಗ್ಗೆ. |
| 16 | ಆಶ್ರಯ | ಖಾಸಗಿ ಜಮೀನು ನಿವೇಶನ ವಿತರಣೆಗಾಗಿ ಖರೀದಿಸುವ ಬಗ್ಗೆ. |
| 17 | ಪಿ.ಪಿ.ಎ. | ಸಾರ್ವಜನಿಕರ ಸ್ವತ್ತು ಒತ್ತುವರಿ ತಡೆಯುವ ಬಗ್ಗೆ. |
| 18 | ಬಾಲಕಾರ್ಮಿಕ | 14 ವರ್ಷದ ಒಳಗಿನ ಮಕ್ಕಳು ಕೂಲಿ ಮಾಡುವುದನ್ನು ತಡೆಗಟ್ಟುವ ಬಗ್ಗೆ. |
| 19 | ನೀರಾವರಿ | ನೀರಾವರಿ ಸಲಹಾ ಸಮಿತಿ ನಡೆಸುವ ಬಗ್ಗೆ ನೀರಿನ ತೆರಿಗೆ, ನಿರ್ವಹಣಾ ತೆರಿಗೆ ವಸೂಲಿ ಬಗ್ಗೆ. |
| 20 | STP | ಛಾಪಾ ಕಾಗದದ ಮೌಲ್ಯ ಮರುಪಾವತಿ ಸಂಬಂಧ ಕ್ರಮ. |
| 21 | ವಿಫಲ ಬಾವಿ | ನೀರು ಬಾರದೆ ವಿಫಲವಾದ ಬಾವಿಗಳಿಗೆ ರಿಯಾಯಿತಿ ಮಂಜೂರಾತಿ ಬಗ್ಗೆ ಸ್ಥಳ ತನಿಖೆ ಮಾಡಿ ವರದಿ ಸಲ್ಲಿಸುವ ಬಗ್ಗೆ. |
| 22 | ಗ್ರಾ.ಪಂ.ಶಾಖೆ | ಗ್ರಾ.ಪಂ/ತಾ.ಪಂ/ಜಿ.ಪಂ ವಿಷಯಗಳಿಗೆ ಪತ್ರ ವ್ಯವಹಾರ. |
| 23 | ಪ್ರ–ವಿಕೋಪ–1 | ಬೆಂಕಿ ಆಕಸ್ಮಿಕ ಪ್ರವಾಹ ಹಾನಿಗೊಳಗಾದವರಿಗೆ ಪರಿಹಾರ ನೀಡುವ ಬಗ್ಗೆ ಕ್ರಮ ವಹಿಸುವುದು. |
| 24 | ಪ್ರ.ವಿಕೋಪ–2 | ಬರ ಪರಿಹಾರ ಯೋಜನೆಯಡಿ ಉಂಟಾದ ಸಮಸ್ಯೆಗಳಿಗೆ ಕ್ರಮ ವಹಿಸುವುದು. |
| 25 | ಸಂ.ಸ.ಶಾ.ಸ.ನಿಧಿ | ವಿಧಾನ ಸಭಾ ಸದಸ್ಯರು/ಸಂಸತ್ ಸದಸ್ಯರ ಅನುದಾನದಿಂದ ನಿರ್ಮಾಣ ಮಾಡುವ ಕಾಮಗಾರಿಗಳ ಪರಿಶೀಲನೆ ಮತ್ತು ವರದಿ ಸಲ್ಲಿಸುವ ಬಗ್ಗೆ. |
| 26 | ADM | ಸಾಮಾನ್ಯ ಆಡಳಿತ ವಿಷಯಕ್ಕೆ ಸಂಬಂಧಿಸಿದಂತೆ ಕ್ರಮ ವಹಿಸುವುದು, ಸಭಾ ನಡವಳಿ, ದಫ್ತರ್, ದಿನಚರಿ ಸಮೀಕ್ಷೆ, ಕಂದಾಯಾಧಿಕಾರಿಗಳ ಸಭೆ. |
| 27 | ಗಣಿಗಾರಿಕೆ | ಗಣಿಗಾರಿಕೆ ಸಂಬಂಧ ಅನುಮತಿ ನೀಡುವ ಬಗ್ಗೆ ಸ್ಥಳ ತನಿಖೆ ಮಾಡಿ, ಜಂಟಿ ವರದಿ ಸಲ್ಲಿಕೆ ಮತ್ತು ಅನಧಿಕೃತ ಗಣಿಗಾರಿಕೆ ತಡೆಗಟ್ಟುವ ಬಗ್ಗೆ ಕ್ರಮ ವಹಿಸುವುದು. |

| ಕ್ರ. ಸಂ | ಶಾಖೆಗಳು | ವಿವರ |
|---|---|---|
| 28 | ಅನುವಂಶಿಕ | A B O A ಆಕ್ಟ್ ಅಡಿ ತೋಟಿ ತಳವಾರಿ ನೀರಗಂಟಿ ಮುಂತಾದ ಕೆಳದರ್ಜೆ ನೌಕರರ ಮತ್ತು ಮಾಜಿ ಪಟೇಲ್ ಶಾನುಭೋಗ್ ವಿಷಯಕ್ಕೆ ಸಂಬಂಧಿಸಿದಂತೆ ಪತ್ರ ವ್ಯವಹಾರ. |
| 29 | ಕಂದಾಯ ಇತರೆ | ಕಂದಾಯ ಇಲಾಖೆ ಹೊರತುಪಡಿಸಿ ಇತರೆ ಇಲಾಖೆಗಳಿಗೆ ಸಂಬಂಧಿಸಿದ ವಿಷಯಗಳಿಗೆ ಪತ್ರ ವ್ಯವಹಾರ. |
| 30 | ಆಹಾರ ಶಾಖೆ | ಪಡಿತರ ಚೀಟಿ ವಿತರಣೆ ಸಾರ್ವಜನಿಕರಿಗೆ ಆಹಾರ ವಿತರಣೆ ವಿಷಯಗಳ ಬಗ್ಗೆ ಕ್ರಮ ವಹಿಸುವುದು. |
| 31 | ಸ್ವಾ.ಹೋ.ಪಿ. ಶಾಖೆ | ಸ್ವಾತಂತ್ರ ಹೋರಾಟಗಾರರ ಪಿಂಚಣಿದಾರರ ಪತ್ರ ವ್ಯವಹಾರ. |
| 32 | ಅರಣ್ಯ ಶಾಖೆ | ಅರಣ್ಯ ಇಲಾಖೆಗೆ ಸರ್ಕಾರಿ ಜಮೀನುಗಳಲ್ಲಿ ಮರವಳಿ ಬೆಳೆಸಿದ ಬಗ್ಗೆ ಮತ್ತು ಫಲ ಉಪಯೋಗಿಸಿಕೊಳ್ಳಲು ಸನ್ನದ್ದು ನೀಡುವಿಕೆ. |
| 33 | ಪುರಸಭೆ | ಪುರಸಭೆ ಪಟ್ಟಣ ಪಂಚಾಯತಿ ಸಂಬಂಧಿಸಿದ ವಿಷಯಗಳಿಗೆ ಪತ್ರ ವ್ಯವಹಾರ. |
| 34 | ದರಖಾಸ್ತು | ಸರ್ಕಾರಿ ಜಮೀನು ಮಂಜೂರಾತಿ ಬಗ್ಗೆ ಕ್ರಮವಹಿಸುವುದು. |
| 35 | ಭೂ ಸುಧಾರಣೆ | ಭೂ ಸುಧಾರಣೆ ಕಾಯ್ದೆ ಅಡಿ ಭೂ ನ್ಯಾಯ ಮಂಡಳಿಗೆ ಸಂಬಂಧಿಸಿದಂತೆ 7ಎ ಅರ್ಜಿಗಳ ಬಗ್ಗೆ ಮತ್ತು ಕಲಂ 79ಎಬಿ, 80, 83 ಅಡಿ ಕ್ರಮ. |
| 36 | ಸಿಬ್ಬಂದಿ ಶಾಖೆ | ಸಿಬ್ಬಂದಿ ಸೇವಾ ವಿಷಯ ನಿರ್ವಹಣೆ ಬಗ್ಗೆ. |
| 37 | ಗ್ರಾ.ಲೆ.ಶಾಖೆ | ಗ್ರಾಮಲೆಕ್ಕಿಗರ ಸೇವಾ ವಿಷಯ ನಿರ್ವಹಣೆ ಬಗ್ಗೆ. |
| 38 | NFBS | ರಾಷ್ಟ್ರೀಯ ಕುಟುಂಬ ಯೋಜನೆ ಅಡಿ ಪರಿಹಾರ ಮಂಜೂರಾತಿ ಬಗ್ಗೆ. |
| 39 | ಹಣಕಾಸು ಶಾಖೆ | DC ಬಿಲ್, TA ಬಿಲ್, ನಗದೀಕರಣ ಮೇಲು ರುಜು ಇತ್ಯಾದಿ ವಿಷಯಗಳ ಬಗ್ಗೆ ಮತ್ತು ವೈದ್ಯಕೀಯ ವೆಚ್ಚ ಮರು ಪಾವತಿ ವಿಷಯ ನಿರ್ವಹಣೆ. |
| 40 | ದೇವಾಲಯ ಶಾಖೆ | ಮುಜರಾಯಿ ದೇವಾಲಯಗಳಿಗೆ ಅಧಿ ಸೂಚಿತ ಸಂಸ್ಥೆಗಳ ಸಂಬಂಧ ವಿಷಯ ನಿರ್ವಹಣೆ, ವ್ಯವಸ್ಥಾಪನಾ ಸಮಿತಿ ರಚನೆ, ಇತ್ಯಾದಿ. |
| 41 | ಸರ್ಕಾರಿ ಬಾಕಿ | ಭೂ ಕಂದಾಯ, ನೀರಿನ ತೆರಿಗೆ, ಮತ್ತು ನಿರ್ವಹಣಾ ತೆರಿಗೆ, ಬ್ಯಾಂಕ್ ಸಾಲ, ಮಿಸಲೇನಿಯಸ್ ರಿಕವರಿ ವಸೂಲಾತಿ ಬಗ್ಗೆ ಕ್ರಮ ವಹಿಸುವುದು. |
| 42 | ದಲಿತರ ಬೇಡಿಕೆ | ಪ.ಜಾತಿ/ಪ.ಪಂಗಡದವರ ಕುಂದು ಕೊರತೆಗಳ ನಿವಾರಣೆ ಬಗ್ಗೆ. |
| 43 | ಅಭಿಲೇಖಾಲಯ | ವಿಲೇವಾರಿಯಾದ ಕಡತಗಳ ನಿರ್ವಹಣೆ ಬಗ್ಗೆ. |
| 44 | ಸಿ.ಎ.ಆರ್. | ನಕಲು ಕೋರಿ ಬಂದವರಿಗೆ ನಕಲು ನೀಡುವುದು. |
| 45 | ಅಕ್ಷರ ದಾಸೋಹ | ಅಕ್ಷರ ದಾಸೋಹ ಯೋಜನೆ ಅಡಿ ಸಂಬಂಧಿಸಿದಂತೆ ಪತ್ರ ವ್ಯವಹಾರ. |
| 46 | ಕಂದಾಯ ಅಪೀಲ್ | ಕ.ಭೂ.ಕಂದಾಯ ಅಧಿ ನಿಯಮ 1964 ಕಲಂ 49, 136(2) ರಡಿ ಬರುವ ಮೇಲ್ಮನವಿ ವಿಚಾರಣೆ. |
| 47 | PTCL SR ಪ್ರಕರಣಗಳು | ಪ.ಜಾತಿ/ಪ.ಪಂಗಡದವರಿಗೆ ಮಂಜೂರಾದ ಜಮೀನು ಪರಭಾರೆ ನಿಷೇಧ ಅವಧಿಯೊಳಗೆ ಮತ್ತು ಸರ್ಕಾರದ ಪೂರ್ವಾನುಮತಿ ಇಲ್ಲದೆ ಕ್ರಯವಾದ ಬಗ್ಗೆ ವಿಚಾರಣೆ. |
| 48 | ಶಿಸ್ತು ಪ್ರಕರಣಗಳು | ಕರ್ನಾಟಕ ನಾಗರಿಕ ಸೇವಾ ನಿಯಂತ್ರಣ ವರ್ಗೀಕರಣ ಮತ್ತು ಮೇಲ್ಮನವಿ 1957 ರಡಿ ಶಿಸ್ತು ನಡವಳಿ ನಡೆಸುವುದು. |
| 49 | ಪುರಸಭೆ ಅಪೀಲು | ಕರ್ನಾಟಕ ಪುರಸಭೆ ಅಧಿ ನಿಯಮ 1964 ಕಲಂ 306(1) ರಡಿ ಮೇಲ್ಮನವಿ ಬಗ್ಗೆ ವಿಚಾರಣೆ. |
| 50 | ಇತರೆ | ಸರ್ಕಾರದಿಂದ ಆಗಿಂದಾಗ್ಗೆ ನೀಡುವ ಸೂಚನೆ, ಆದೇಶಗಳನ್ವಯ ಕ್ರಮ ತೆಗೆದುಕೊಳ್ಳುವುದು. |

### 3. 4(1)ಬಿ(11) ಅಧಿಕಾರ ಮತ್ತು ಕರ್ತವ್ಯಗಳು:–

ಉಪವಿಭಾಗಾಧಿಕಾರಿಗಳು, ತುಮಕೂರು, ಇವರ ಕಛೇರಿಯ ಅಧಿಕಾರಿ ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳು.

| ಕ್ರ. ಸಂ. | ಹುದ್ದೆಯ ಹೆಸರು | ಅಧಿಕಾರ ಮತ್ತು ಕರ್ತವ್ಯಗಳು |
|---|---|---|
| 1 | ಉಪವಿಭಾಗಾಧಿಕಾರಿಗಳು ಮತ್ತು ಉಪವಿಭಾಗೀಯ ದಂಡಾಧಿಕಾರಿಗಳು. | 1. ಉಪವಿಭಾಗದ ಸಾಮಾನ್ಯ ಆಡಳಿತ ನಿರ್ವಹಣೆ.<br>2. ಕಾನೂನು ಸುವ್ಯವಸ್ಥೆ ಕಾಪಾಡುವುದು, ಸಿಆರ್‌ಪಿ.ಸಿ. ಅಡಿ ಕ್ರಮವಹಿಸುವುದು.<br>3. ಕಂದಾಯ ನ್ಯಾಯಾಲಯದ ಮೇಲ್ಮನವಿ ಪ್ರಕರಣಗಳ ವಿಲೇವಾರಿ.<br>4. ಸಾರ್ವಜನಿಕ ಕುಂದು ಕೊರತೆ ನಿವಾರಣೆ.<br>5. ಭೂ ಸ್ವಾಧೀನ ಪ್ರಕರಣಗಳ ನಡವಳಿಕೆ ನಡೆಸುವುದು.<br>6. PTCL ಪ್ರಕರಣಗಳ ವಿಲೇವಾರಿ.<br>7. ತುಮಕೂರುತಾಲ್ಲೋಕು ಭೂನ್ಯಾಯಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಣೆ<br>8. ಕಲಂ 77ಎ ರಡಿ ಸಲ್ಲಿಸಿದ 7ಎ ಅರ್ಜಿ ವಿಲೇವಾರಿ.<br>9. ಕರ್ನಾಟಕ ಮುನ್ಸಿಪಲ್ ಕಾಯ್ದೆ ಕಲಂ 306(1) ರಡಿ ಪ್ರಕರಣ ವಿಲೇವಾರಿ.<br>10. ಸಾರ್ವಜನಿಕ ಮಾಹಿತಿ ಅಧಿಕಾರಿ. |
| 2 | ಭೂ ದಾಖಲೆಗಳ ಸಹಾಯಕ ನಿರ್ದೇಶಕರು ಹಾಗೂ ತಾಂತ್ರಿಕ ಸಹಾಯಕರು. | 1. ಉಪವಿಭಾಗದ ಎಲ್ಲಾ ತರಹದ ಪೋಡಿ ಕಾರ್ಯದ ಪ್ರಗತಿ ನಿರ್ವಹಣೆ.<br>2. ಉಪವಿಭಾಗಾಧಿಕಾರಿಗಳ ಸೂಚಿಸಿರುವ ಪೋಡಿ ಶಾಖೆ, ಇತರೆ ಶಾಖೆಗಳು. |
| 3 | ವ್ಯವಸ್ಥಾಪಕರು. | 1. ಕಛೇರಿಯ ಎಲ್ಲಾ ಶಾಖೆಗಳ ಮೇಲ್ವಿಚಾರಣೆ.<br>2. ಎ.ಜಿ.ಆಡಿಟ್ ಮತ್ತು ರೆವಿನ್ಯೂ ಆಡಿಟ್ ವರದಿಗಳ ಕಂಡಿಕೆಗಳಿಗೆ ಉತ್ತರ ಸಲ್ಲಿಸುವುದು.<br>3. ಮೇಲಾಧಿಕಾರಿಗಳಿಂದ ಬಂದ ಕಛೇರಿಗಳ ತಪಾಸಣೆಗಳಿಗೆ ಅನುಸರಣಾ ವರದಿ ಸಲ್ಲಿಕೆ.<br>4. ಅಧೀನ ಕಛೇರಿಗಳ ತಪಾಸಣೆಯಲ್ಲಿ ಸಹಕರಿಸುವುದು.<br>5. ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ, ಉಪವಿಭಾಗಾಧಿಕಾರಿಗಳ ಕಛೇರಿ, ತುಮಕೂರು. |
| 4 | ಪ್ರಥಮ ದರ್ಜೆ ಸಹಾಯಕರು. (ವಿಷಯ ನಿರ್ವಾಹಕರು) | ಅವರಿಗೆ ವಹಿಸಿದ ಶಾಖೆಗಳ ವಿಷಯ ನಿರ್ವಹಣೆ. |
| 5 | ದ್ವಿತೀಯ ದರ್ಜೆ ಸಹಾಯಕರು. (ವಿಷಯ ನಿರ್ವಾಹಕರು) | ಅವರಿಗೆ ವಹಿಸಿದ ಶಾಖೆಗಳ ವಿಷಯ ನಿರ್ವಹಣೆ. |
| 6 | ಶೀಘ್ರ ಲಿಪಿಗಾರರು | 1. ಉಪವಿಭಾಗಾಧಿಕಾರಿಗಳ ಆಪ್ತಕಾರ್ಯ ನಿರ್ವಹಿಸುವುದು.<br>2. ಉಪವಿಭಾಗಾಧಿಕಾರಿಗಳು ವಹಿಸುವ ಯಾವುದೇ ಕೆಲಸ.<br>3. ಸ್ಥಳ ತನಿಖೆ ಕಡತಗಳ ನಿರ್ವಹಣೆ.<br>4. ಉಪವಿಭಾಗಾಧಿಕಾರಿಗಳ ದಿನಚರಿ ನಿರ್ವಹಿಸುವುದು.<br>5. ಉಪವಿಭಾಗಾಧಿಕಾರಿಗಳ ಪ್ರವಾಸ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವುದು.<br>6. ಈ ನ್ಯಾಯಾಲಯದ ಆದೇಶ ಬೆರಳಚ್ಚು ಮತ್ತು ಹೆಚ್ಚುವರಿ ಬೆರಳಚ್ಚು ಕೆಲಸ ಇತ್ಯಾದಿ. |
| 7 | ಬೆರಳಚ್ಚುಗಾರರು. | ಎಲ್ಲಾ ಶಾಖೆಗಳ ಬೆರಳಚ್ಚು ಕಾರ್ಯ ಮತ್ತು ನ್ಯಾಯಾಲಯದ ಆದೇಶಗಳ ಬೆರಳಚ್ಚು ಕಾರ್ಯ. |
| 8 | ಎ.ದ.ಭೂ ಮಾಪಕರು. | 1. ಪೋಡಿ ಕಾರ್ಯದ ಪ್ರಗತಿ ನಿರ್ವಹಣೆ.<br>2. ಉಪವಿಭಾಗಾಧಿಕಾರಿಗಳು ಹಾಗೂ ಭೂ ದಾಖಲೆಗಳ ತಾಂತ್ರಿಕ ಸಹಾಯಕರು ಸೂಚಿಸುವ ಪೋಡಿ ಶಾಖೆಯ ಕೆಲಸಗಳು. |
| 9 | ದಫೇದಾರ್ | ಅವರಿಗೆ ವಹಿಸಿದ ಕಾರ್ಯಗಳನ್ನು ಆಯಾ ದಿನದಂದೇ ನಿರ್ವಹಿಸುವುದು. |
| 10 | ಡಿ ಗ್ರೂಪ್ | ಅವರಿಗೆ ವಹಿಸಿದ ಕಾರ್ಯಗಳನ್ನು ಆಯಾ ದಿನದಂದೇ ನಿರ್ವಹಿಸುವುದು. |

**ಉಪವಿಭಾಗಾಧಿಕಾರಿಗಳ ಕಛೇರಿ, ತುಮಕೂರು, ಇವರ ಕಛೇರಿ, ಅಧಿಕಾರಿ ಮತ್ತು ನೌಕರರು ನಿರ್ವಹಿಸುವ ಕೆಲಸದ ವಿವರಗಳು.**

| | | |
|---|---|---|
| 1 | ಶ್ರೀ.ಎಂ.ಆರ್.ರವಿಕುಮಾರ್,ಕೆ.ಎ.ಎಸ್. ಉಪವಿಭಾಗಾಧಿಕಾರಿ, ಮತ್ತು ಉಪವಿಭಾಗೀಯ ದಂಡಾಧಿಕಾರಿ. | ಉಪವಿಭಾಗದ ಎಲ್ಲಾ ಸಾಮಾನ್ಯ ಆಡಳಿತ ನಿರ್ವಹಣೆ, ಕಾನೂನು ಸುವ್ಯವಸ್ಥೆ, ಕಂದಾಯ, ಪುರಸಭೆ, ಮೇಲ್ಮನವಿ, ಭೂ ಸ್ವಾಧೀನ ನಡವಳಿ, ಭೂ ನ್ಯಾಯ ಮಂಡಳಿ ತೀರ್ಮಾನ, ಸಾರ್ವಜನಿಕ ಮಾಹಿತಿ. |
| 2 | ಶ್ರೀ.ತಿಮ್ಮೇಗೌಡ, ವ್ಯವಸ್ಥಾಪಕರು. | ಕಛೇರಿಯ ಎಲ್ಲಾ ಶಾಖೆಗಳ ಮೇಲ್ವಿಚಾರಣೆ, ಆಡಿಟ್ ವರದಿಗಳು, ಕಛೇರಿ ತಪಾಸಣೆ ವರದಿ, ಅಧೀನ ಕಛೇರಿ ತಪಾಸಣೆ, ಸಹಾಯಕ ಮಾಹಿತಿ ಅಧಿಕಾರಿ. |
| 3 | ಬಿ.ಹೆಚ್.ರಮಾಕುಮಾರಿ, ಪ್ರ.ದ.ಸ. | ಎ.ಡಿ.ಎಂ. ಎಂ.ಎ.ಜಿ. ಪಿ.ಟಿ.ಸಿ.ಎಲ್. ಯು.ಡಿ.ಆರ್. ರೈತರ ಆತ್ಮಹತ್ಯೆ, ಮಾಹಿತಿ ಹಕ್ಕು, ಎಂ.ಎ.ಜಿ. ಎಂ.ಯು.ಎನ್. ಪಿ.ಟಿ.ಸಿ.ಎಲ್.ನ್ಯಾಯಾಲಯ ಪ್ರಕರಣಗಳು, ವಿವಿಧ ಸಭೆಗಳು. |
| 4 | ಬಿ.ಆರ್.ಗಾಯತ್ರಿ, ಪ್ರ.ದ.ಸ. | ಸಿಬ್ಬಂದಿ, ಸಿಸಿಎ. ವಿ.ಎ.ಎಸ್. ಹೆಚ್.ಎಸ್.ಎ. ಬಿಲ್ ತಯಾರಿಕೆ, ಲೆಕ್ಕ. |
| 5 | ನರಸಿಂಹಮೂರ್ತಿ, ಪ್ರ.ದ.ಸ. | ಎಲ್.ಆರ್.ಎಫ್. ಆಶ್ರಯ, 79ಎ ಮತ್ತು ಬಿ ಪ್ರಕರಣಗಳು, ತುಮಕೂರು ತಾಲ್ಲೋಕು ಆರ್.ಆರ್.ಟಿ. ಅಪೀಲುಗಳು. |
| 6 | ಸಿ.ಎಸ್.ತಿಮ್ಮಯ್ಯ, ಪ್ರ.ದ.ಸ. | ಡಿ.ವಿ.ಎಸ್. ಚುನಾವಣೆ, ಜೀತ, ಆರಾಧನಾ, ಊರ್ಡಿಗೆರೆ ಸೆಂಟ್ರಲ್ ಪಿ.ಯು.ಕಾಲೇಜು ಸ್ವರ್ಣಾಂಬ ಹೈಸ್ಕೂಲ್ ಆಡಳಿತ. |
| 7 | ಎಂ.ಎಸ್.ಅಶ್ವತ್ಥನಾರಾಯಣ ರಾವ್, ಎ.ದ.ಸ. (ನಿಯೋಜನೆ) | ಆರ್.ಆರ್.ಟಿ ಐ.ಎನ್.ಎ. ಹೆಚ್.ಓ.ಎ. ಗುಬ್ಬಿ ತಾ// ಆರ್.ಆರ್.ಟಿ. ಅಪೀಲುಗಳು, ಕಂಪ್ಯೂಟರ್ ಆರ್.ಟಿ.ಸಿ. |
| 8 | ಎ.ಎನ್.ಚಂದ್ರಶೇಖರ್, ಎ.ದ.ಸ. | ಭೂ ಸ್ವಾಧೀನ, ಭೂ ಪರಿವರ್ತನೆ. |
| 9 | ಬಸವರಾಜಯ್ಯ, ಎ.ದ.ಸ. | ಕಡತದ ಕೋಣೆ ನಿರ್ವಹಣೆ, ಸಿ.ಎ.ಆರ್. ಐ.ಆರ್.ಆರ್. ಸ್ಟೇಷನರಿ. |
| 10 | ಎಂ.ಪುಷ್ಪಾವತಿ, ಎ.ದ.ಸ. | ಮಿಸಲೇನಿಯಸ್,ಎನ್.ಎಫ್.ಬಿ.ಎಸ್. ಎಫ್.ಓ.ಆರ್ ಎನ್.ಸಿ.ಆರ್ .ಡಿ.ಸಿ.ಬಿ. ಸಿ.ಎ.ಎಲ್. |
| 11 | ಎಂ.ವಿ.ಯಶೋಧಮ್ಮ, ಎ.ದ.ಸ. | ಆರ್.ಎ. ಕುಣಿಗಲ್ ತಾಲ್ಲೋಕು ಆರ್.ಆರ್.ಟಿ.ಅಪೀಲುಗಳು. |
| 12 | ರುಕ್ಮಿಣಿ, ಎ.ದ.ಸ. | ಸ್ವೀಕೃತಿ, ರವಾನೆ ಶಾಖೆ, ಆ.ಸ.ಪತ್ರ ವಹಿ, ಪಿ.ಜಿ.ಸಿ. ಇತ್ಯಾದಿ |
| 13 | ಸುಹಾಸಿನಿ, ಎ.ದ.ಸ. | ಎಂ.ಯು.ಎನ್.,ಎಫ್.ಡ.ಬ್ಲ್ಯುಸಿ,, ಮಿಸಲೇನಿಯಸ್, ಆಹಾರ |
| 14 | ವಿಶ್ವನಾಥ, ಶೀಘ್ರಲಿಪಿಗಾರರು. | ಸಿ.ಎ.ಎಲ್. ಬರ ಪರಿಹಾರ, ಆಹಾರ. ವಿ.ಪಿ.ಸಿ. |
| 15 | ಜಿ.ಪ್ರಕಾಶ್, ಆಪ್ತ ಸಹಾಯಕರು. | ಫಡಾ, ಎಂ.ಪಿ.ಫಂಡ್, ಉ.ವಿ.ಗಳ ದಿನಚರಿ, ಸಭಾ ನಡವಳಿ, ಇತರೆ ಕೆಲಸಗಳು. |
| 16 | ಹೆಚ್.ಎಸ್.ಹೇಮಲತ, ಬೆರಳಚ್ಚುಗಾರರು. | ಬೆರಳಚ್ಚು ಕೆಲಸ. |
| 17 | ಎಲ್.ನರಸಿಂಹಮೂರ್ತಿ, ವಾಹನ ಚಾಲಕ. | ವಾಹನ ಚಾಲನೆ, ನಿರ್ವಹಣೆ, ಲಾಗ್‌ಬುಕ್ ಬರೆಯುವುದು. |
| 18<br>19<br>20<br>21 | ಹೆಚ್.ಬಿ.ಚೌಡಯ್ಯ.<br>ನರಸಿಂಹಯ್ಯ.<br>ರುದ್ರಪ್ಪ.(ನಿಯೋಜನೆ ಮೇರೆ)<br>ಎಲ್.ಶಿವಕುಮಾರ್, (ನಿಯೋಜನೆ ಮೇರೆ) | ಕಛೇರಿ ಸ್ವಚ್ಚತೆ ನಿರ್ವಹಣೆ, ಅಧಿಕಾರಿ, ನೌಕರರು ವಹಿಸುವ ಕೆಲಸ ನಿರ್ವಹಣೆ. |

**4.4(1)ಬಿ(111)ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆ ಮಾರ್ಗಸೂಚಿಗಳನ್ನೊಳಗೊಂಡಂತೆ ನಿರ್ಣಯ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸುವ ಕಾರ್ಯ ವಿಧಾನ:–**

1. ಉಪವಿಭಾಗಾಧಿಕಾರಿಗಳು ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಮೇಲ್ಕಂಡ ಕಾರ್ಯಗಳಡಿ ಅಂತಿಮ ನಿರ್ಣಯ ತೆಗೆದುಕೊಳ್ಳುವುದು.

2. ವ್ಯವಸ್ಥಾಪಕರು:–ವಿಷಯ ನಿರ್ವಾಹಕರು ಮಂಡಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ತೆಗೆದು ಕೊಳ್ಳಬಹುದಾದ ಕ್ರಮಗಳ ಬಗ್ಗೆ ತಿಳಿಸಿ, ಉಪವಿಭಾಗಾಧಿಕಾರಿಗಳಿಗೆ ಕಡತ ಸಲ್ಲಿಸುವುದು.

3. ವಿಷಯ ನಿರ್ವಾಹಕರು ಕಛೇರಿ ಕಾರ್ಯ ವಿಧಾನ ಕೈಪಿಡಿಯಂತೆ ಅವರಿಗೆ ವಹಿಸಿದ ಶಾಖೆಗಳಿಗೆ ಸಂಬಂಧಪಟ್ಟ ಕಾನೂನು ಅವಕಾಶ ಪರಿಶೀಲಿಸಿ, ಟಿಪ್ಪಣಿಯನ್ನು ವ್ಯವಸ್ಥಾಪಕರಿಗೆ ಮಂಡಿಸುವುದು.

**4(1) IV ಪ್ರಕಾರ್ಯಗಳ ನಿರ್ವಹಣೆಗೆ ಅಳವಡಿಸಿಕೊಂಡಿರುವ ಸೂತ್ರಗಳು:–**

1. ಉಪವಿಭಾಗಾಧಿಕಾರಿಗಳು ಆದ್ಯತೆ ಮೇರೆ ಕಾರ್ಯಗಳನ್ನು ನಿರ್ವಹಿಸುವುದು.
2. ತಾಂತ್ರಿಕ ಸಹಾಯಕರು ಹಾಗೂ ಭೂ ದಾಖಲೆ ಸಹಾಯಕ ನಿರ್ದೇಶಕರು ಉಪವಿಭಾಗಾಧಿಕಾರಿಗಳು ಸೂಚಿಸಿರುವ ಪೋಡಿ ಶಾಖೆ ಮತ್ತು ಇತರೆ ಕೆಲಸಗಳ ನಿರ್ವಹಣೆ.
3. ವ್ಯವಸ್ಥಾಪಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
4. ಪ್ರ.ದ.ಸ. ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
5. ದ್ವಿ.ದ.ಸ. ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
6. ಶೀಘ್ರಲಿಪಿಗಾರರು ಅರೆಸರ್ಕಾರಿ ಪತ್ರಗಳ ನಿರ್ವಹಣೆ, ನ್ಯಾಯಾಲಯದ ಆದೇಶ ಮತ್ತು ಕಾರ್ಯಕ್ರಮದಲ್ಲಿ ಭಾಗವಹಿಸುವುದು, ಸ್ಥಳ ತನಿಖೆಯ ಸಂದರ್ಭದಲ್ಲಿ ಭಾಗವಹಿಸುವುದು ಮತ್ತು ದಿನಚರಿ ಸಲ್ಲಿಸುವುದು.
7. ತಾಲ್ಲೋಕು ಸರ್ವೇಯರ್ ಆದ್ಯತೆ ಮೇರೆ ಅಳತೆ ಕಾರ್ಯಗಳನ್ನು ನಿರ್ವಹಿಸುವುದು.
8. ಬೆರಳಚ್ಚುಗಾರರು ಎಲ್ಲಾ ಶಾಖೆಯ ಕರಡು ಪ್ರತಿ ಮತ್ತು ನ್ಯಾಯಾಲಯದ ಅದೇಶಗಳನ್ನು ಬೆರಳಚ್ಚು ಮಾಡುವುದು.
9. ವಾಹನ ಚಾಲಕರು ವಾಹನ ಚಾಲನೆ ಮಾಡುವುದು.
10. ದಫೇದಾರ್ ಅವರಿಗೆ ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.
11. ಡಿ ಗ್ರೂಪ್ ನೌಕರರು ಅವರಿಗೆ ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.

**4(I)BV ಇಲಾಖೆಯಲ್ಲಿನ ನೌಕರರು ಪ್ರಕಾರ್ಯಗಳ ನಿರ್ವಹಣೆಗೆ ಬಳಸುತ್ತಿರುವ ಇಲಾಖೆಯಲ್ಲಿರುವ ಅಧೀನದಲ್ಲಿರುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು:–**

| | |
|---|---|
| 1 | ಕರ್ನಾಟಕ ಭೂ ಕಂದಾಯ ಅಧಿ ನಿಯಮ 1964. |
| 2 | ಕರ್ನಾಟಕ ಭೂ ಕಂದಾಯ ನಿಯಮಾವಳಿ 1966. |
| 3 | ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961. |
| 4 | ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969. |
| 5 | ಕರ್ನಾಟಕ ಪ.ಜಾ/ಪ.ಪಂ ಗಳ ( ಹಲವು ಜಮೀನುಗಳ ಪರಭಾರೆ ನಿಷೇಧ ) |
| 6 | ಭೂ ಸ್ವಾಧೀನ ಅಧಿ ನಿಯಮ. |
| 7 | ಮತದಾರರ ನೊಂದಣಿ ನಿಯಮಾವಳಿ 1960. |
| 8 | ಕರ್ನಾಟಕ ಪುರಸಭೆ ಅಧಿ ನಿಯಮ 1964. |
| 9 | ಕರ್ನಾಟಕ ಸಾರ್ವಜನಿಕ ಅಬೆನ್ಸ್‌ಗಳು ಅಧಿಕೃತ ಅನುಭವದಾರರನ್ನು ಹೊರಹಾಕುವುದು 1974. |
| 10 | ಕರ್ನಾಟಕ ಪಂಚಾಯತ್ ರಾಜ್ ಅಧಿ ನಿಯಮ 1993. |
| 11 | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958. |
| 12 | ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ 1957) |
| 13 | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಡತೆ 1956. |
| 14 | ಕಾಲ ಪರಿಮಿತಿ ಅಧಿ ನಿಯಮ 1963. |
| 15 | ಸಿವಿಲ್ ಪ್ರಕ್ರಿಯೆ ಸಂಹಿತೆ 1908. |
| 16 | ಕರ್ನಾಟಕ ನೀರಾವರಿ ಅಧಿ ನಿಯಮ 1965. |
| 17 | ಕರ್ನಾಟಕ ನೀರಾವರಿ (ನೀರಿನ ಕರ ಅಧಿನಿಯಮ) |
| 18 | ದಂಡ ಪ್ರಕ್ರಿಯೆ ಸಂಹಿತೆ ಕೋಡ್ 1974. |
| 19 | ಕರ್ನಾಟಕ ಪೋಲೀಸ್ ಅಧಿ ನಿಯಮ 1963. |
| 20 | ಭಾರತ ಸಾಕ್ಷಿ ಅಧಿ ನಿಯಮ 1972. |

| | |
|---|---|
| 21 | ಪ.ಜಾ/ಪ.ಪಂ ಗಳ (ದೌರ್ಜನ್ಯ)ಅಧಿ ನಿಯಮ 1989. |
| 22 | ಜೀತದಾಳು ಪದ್ಧತಿ ಅಧಿ ನಿಯಮ 1976. |
| 23 | ವಕ್ಫ್ ಅಧಿ ನಿಯಮ 1954. |
| 24 | ಅಪರಾಧಿಕ ಕಾನೂನು ಮತ್ತು ಕೈದಿಗಳನ್ನು ಗುರುತಿಸುವುದು (ಕರ್ನಾಟಕ ವ್ಯಾಪ್ತಿ ಮತ್ತು ತಿದ್ದುಪಡಿ) ಅಧಿ ನಿಯಮ 1975. |
| 25 | ಕರ್ನಾಟಕ ಆರ್ಥಿಕ ಸಂಹಿತೆ ಮಾಹಿತಿ ಪಡೆಯಲು ಹಕ್ಕು ಅಧಿ ನಿಯಮ 2005. |
| 26 | (MCE) ಮ್ಯಾನ್ಯುಯಲ್ ಕಂಟ್ಯಾಜನಲ್ ಎಕ್ಸ್‌ಪೆಂಡೀಚರ್. |
| 27 | ಸರ್ಕಾರದಿಂದ ಆಗಿಂದಾಗ್ಗೆ ಬರುವ ಸುತ್ತೋಲೆ, ಅಧಿ ಸೂಚನೆ ಮುಂತಾದ ನಿರ್ದೇಶನಗಳು ಹಾಗೂ ಇನ್ನಿತರೆ ಅಧಿನಿಯಮ, ನಿಯಮಾವಳಿಗಳು. |

**4(1)bVI ಇಲಾಖೆ ಹೊಂದಿರುವ ಅಥವಾ ಇಲಾಖೆಯ ಸ್ವಾಧೀನದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳ ಪಟ್ಟಿ:–**

**4(1) ಬಿ(1) ರಲ್ಲಿ ಹೇಳಿದ ಶಾಖೆಗಳ ವಿಷಯ ವಹಿ ಮತ್ತು ವಿಲೇವಾರಿ ಕಡತಗಳು.**

**ಪ್ರಗತಿ ತ:ಖ್ತೆಗಳು:–** ಉಪವಿಭಾಗದ ಡಿ.ಸಿ.ಬಿ, ಹಾಜರಾತಿ ವಹಿ ಸಾಂದರ್ಭಿಕ ರಜೆ ವಹಿ, ವ್ಯವಹಾರಿಕ ಅಂಕಿ ಅಂಶಗಳು, ವೇತನ ಬಟವಾಡಿ ವಹಿ, ವೇತನದ ಬಡ್ತಿ ವಹಿ, ನಗದು ಪುಸ್ತಕ ವಹಿ, ಸೇವಾ ವಹಿ, ಪೀಠೋಪಕರಣಗಳ ವಹಿ, ಗ್ರಂಥಾಲಯದ ಅಭಿಲೇಖಾಲಯದ ಲೇಖನಾ ಸಾಮಾಗ್ರಿ ದಾಸ್ತಾನು ವಹಿ ಮತ್ತು ವಿತರಣೆ ವಹಿ.

**4(I)b VII ಕಾರ್ಯನೀತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನ ಪ್ರತಿನಿಧಿಗಳ ಜೊತೆ ಸಮಾಲೋಚಿಸಲು ಅಥವಾ ಪ್ರಾತಿನಿಧ್ಯಕ್ಕೆ ಇರುವ ವ್ಯವಸ್ಥೆಗಳ ವಿವರಗಳು:–**

–ಇಲ್ಲಾ–

**4(I)b VIII** ಸಲಹೆಯನ್ನು ಪಡೆಯುವ ಸಂದರ್ಭದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಇರುವಂತೆ ರಚಿಸಿರುವ ಮಂಡಳಿಗಳು ಷರತ್ತುಗಳು, ಸಮಿತಿಗಳು ಮತ್ತು ಇತರೆ ಸಂಸ್ಥೆಗಳು ಮತ್ತು ಇವುಗಳು ನಡೆಸುವ ಸಭೆಗಳು ಸಾರ್ವಜನಿಕರಿಗೆ ಮುಕ್ತವೇ ? ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವುದೇ ?

ಭೂ ನ್ಯಾಯ ಮಂಡಳಿ, ತುಮಕೂರು, ಜೀತ ಪದ್ಧತಿ ನಿರ್ಮೂಲನೆ ಮತ್ತು ಪುನರ್ವಸತಿ ಸಮಿತಿ, ಉಪವಿಭಾಗ ಮಟ್ಟದ ದಲಿತರ ಬೇಡಿಕೆ ಸಮಿತಿ, ಅನಧಿಕೃತ ಒತ್ತುವರಿ ತೆರವು ಸಮಿತಿ, (ಟಾಸ್ಕ್ ಫೋರ್ಸ್) ಮುಂತಾದವುಗಳು.

**4(I)bIX ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ (Directory)**

| ಕ್ರ. ಸಂ. | ಹುದ್ದೆಯ ಹೆಸರು | ದೂರವಾಣಿ ಸಂಖ್ಯೆ | ಮೊಬೈಲ್ ನಂ. |
|---|---|---|---|
| 1 | ಶ್ರೀ.ಎಂ.ಆರ್.ರವಿಕುಮಾರ್ ಕೆ.ಎ.ಎಸ್. ಉಪವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ, | 2278493 (ಕ) 2284040 (ನಿ) | 9448579297 |
| 2 | ಶ್ರೀ.ತಿಮ್ಮೇಗೌಡ, ವ್ಯವಸ್ಥಾಪಕರು. | (08134)–252368 | 9945917894 |
| 3 | ಬಿ.ಹೆಚ್.ರಮಾಕುಮಾರಿ, ಪ್ರ.ದ.ಸ. | 2276260 | 9448694323 |
| 4 | ಬಿ.ಆರ್.ಗಾಯತ್ರಿ, ಪ್ರ.ದ.ಸ. | 2291377 | – |
| 5 | ನರಸಿಂಹಮೂರ್ತಿ, ಪ್ರ.ದ.ಸ. | 2260931 | 9449652972 |
| 6 | ಸಿ.ಎಸ್.ತಿಮ್ಮಯ್ಯ, ಪ್ರ.ದ.ಸ. | 2290672 | 9845365278 |
| 7 | ಎಂ.ಎಸ್.ಅಶ್ವತ್ಥನಾರಾಯಣ ರಾವ್, ಪ್ರ.ದ.ಸ. (ನಿಯೋಜನೆ) | 2273373 | – |
| 8 | ಬಸವರಾಜಯ್ಯ, ಪ್ರ.ದ.ಸ.(ನಿಯೋಜನೆ) | 2242266 | 9845562194 |
| 9 | ಎ.ಎನ್.ಚಂದ್ರಶೇಖರ್, ಎ.ದ.ಸ. | 08138–232908 | 9916774083 |
| 10 | ಎಂ.ಪುಷ್ಪಾವತಿ, ಎ.ದ.ಸ. | 2260221 | |
| 11 | ಎಂ.ವಿ.ಯಶೋಧಮ್ಮ, ಎ.ದ.ಸ. | – | 9448769609 |
| 12 | ರುಕ್ಮಿಣಿ , ಎ.ದ.ಸ., | 9448824663 | |
| 13 | ಸುಹಾಸಿನಿ, ಎ.ದ.ಸ., | 9886597491 | |
| 14 | ವಿಶ್ವನಾಥ, ಶೀಘ್ರಲಿಪಿಗಾರರು. | 9739129842 | 9448443402 |
| 15 | ಹೆಚ್.ಎಸ್.ಹೇಮಲತ, ಬೆರಳಚ್ಚುಗಾರರು. | 2256457 | – |
| 16 | ಎಲ್.ನರಸಿಂಹಮೂರ್ತಿ, ವಾಹನ ಚಾಲಕ. | – | – |

| ಕ್ರ. ಸಂ. | ಹುದ್ದೆಯ ಹೆಸರು | ದೂರವಾಣಿ ಸಂಖ್ಯೆ | ಮೊಬೈಲ್ ನಂ. |
|---|---|---|---|
| 17 | ದಫೇದಾರ್ ಹುದ್ದೆ ಖಾಲಿ ಇದೆ. | – | – |
| 18 | ಹೆಚ್.ಬಿ.ಚೌಡಯ್ಯ, ಗ್ರೂಪ್ ಡಿ. | | 9972149077<br>9972748099 |
| 19 | ನರಸಿಂಹಯ್ಯ, ಗ್ರೂಪ್ ಡಿ. | – | – |
| 20 | ರುದ್ರಪ್ಪ, ಗ್ರೂಪ್ ಡಿ. (ನಿಯೋಜನೆ ಮೇರೆ) | – | 9986245266 |
| 21 | ಎಲ್.ಶಿವಕುಮಾರ್, ಗ್ರೂಪ್ ಡಿ. (ನಿಯೋಜನೆ ಮೇರೆ) | 2201463 | 9945098147 |
| 20 | ಶ್ರೀ.ಜಿ. ಪ್ರಕಾಶ್, ಶೀಘ್ರಲಿಪಿಗಾರರು. (ನಿಯೋಜನೆ ಮೇರೆ) | 2292201 | 9480231665 |
| 21 | ತಾಂತ್ರಿಕ ಸಹಾಯಕರು, ಎ.ಡಿ.ಎಲ್.ಆರ್ ಹುದ್ದೆ ಖಾಲಿ ಇದೆ. | – | – |
| 22 | ಆರ್.ಕೆ.ಮಂಜುನಾಥ್, ದ್ವಿ.ದ.ಭೂ ಮಾಪಕರು. | 225645 | 9448661172 |

**4(1) B X ಅಧಿಕಾರಿ / ನೌಕರರು ಹುದ್ದೆಯ ಹೆಸರು ನಿವ್ವಳ ಸಂಬಳ**

ತುಮಕೂರು ಉಪವಿಭಾಗಾಧಿಕಾರಿಗಳು (ಕಂದಾಯ ಇಲಾಖೆ) ತುಮಕೂರು ಇವರ ಮತ್ತು ಕಛೇರಿ ನೌಕರರು ಪಡೆಯುತ್ತಿರುವ ಮಾಸಿಕ ವೇತನ ವಿವರಗಳು.

**2053 ಜಿಲ್ಲಾ ಆಡಳಿತ ಲೆಕ್ಕ ಶೀರ್ಷಿಕೆ.**

| ಕ್ರ ಸಂ | ಹೆಸರು ಮತ್ತು ಪದನಾಮ | ನಿವ್ವಳ ವೇತನ ರೂ | ಷರಾ |
|---|---|---|---|
| 1 | ಶ್ರೀ.ಎಂ.ಆರ್. ರವಿಕುಮಾರ್, ಕೆ.ಎ.ಎಸ್., ಉಪವಿಭಾಗಾಧಿಕಾರಿ. | 19,500=00 | |
| 2 | ಶ್ರೀ.ತಿಮ್ಮೇಗೌಡ, ವ್ಯವಸ್ಥಾಪಕರು. | 20,525=00 | |
| 3 | ಶ್ರೀಮತಿ.ಬಿ.ಹೆಚ್. ರಮಾಕುಮಾರಿ, ಪ್ರಥಮದರ್ಜೆ ಸಹಾಯಕರು | 18,462=00 | |
| 4 | ಶ್ರೀ. ನರಸಿಂಹಮೂರ್ತಿ, ಪ್ರಥಮದರ್ಜೆ ಸಹಾಯಕರು | 14,350=00 | |
| 5 | ಶ್ರೀ. ಸಿ.ಎಸ್.ತಿಮ್ಮಯ್ಯ, ಪ್ರಥಮದರ್ಜೆ ಸಹಾಯಕರು | 15,025=00 | |
| 6 | ಶ್ರೀಮತಿ. ಟಿ.ಎಸ್. ರುಕ್ಮಿಣಿ, ದ್ವಿತೀಯದರ್ಜೆ ಸಹಾಯಕರು | 7,275=00 | |
| 7 | ಶ್ರೀ.ಎ.ಎನ್.ಚಂದ್ರಶೇಖರ್, ದ್ವಿತೀಯದರ್ಜೆ ಸಹಾಯಕರು | 9,556=00 | |
| 8 | ಕು.ಡಿ.ವಿ. ಸುಹಾಸಿನಿ, ದ್ವಿತೀಯದರ್ಜೆ ಸಹಾಯಕರು | 7,275=00 | |
| 9 | ಶ್ರೀಮತಿ.ಎಂ.ವಿ. ಯಶೋಧಮ್ಮ, ದ್ವಿತೀಯದರ್ಜೆ ಸಹಾಯಕರು | 9,119=00 | |
| 10 | ಶ್ರೀಮತಿ.ಎಂ. ಪುಷ್ಪಾವತಿ, ದ್ವಿತೀಯದರ್ಜೆ ಸಹಾಯಕರು | 9,138=00 | |
| 11 | ಶ್ರೀ.ವಿಶ್ವನಾಥ, ಶೀಘ್ರಲಿಪಿಗಾರರು. | 14,335=00 | |
| 12 | ಶ್ರೀಮತಿ.ಹೆಚ್.ಎಸ್.ಹೇಮಲತ, ಬೆರಳಚ್ಚುಗಾರರು. | 9,228=00 | |
| 13 | ಶ್ರೀ.ಎಲ್.ನರಸಿಂಹಮೂರ್ತಿ, ವಾಹನಚಾಲಕರು. | 9,841=00 | |
| 14 | ದಫೇದಾರ್ ಹುದ್ದೆ ಖಾಲಿ ಇದೆ. | | |
| 15 | ಶ್ರೀ.ಹೆಚ್.ಬಿ.ಚೌಡಯ್ಯ, ಗ್ರೂಪ್ ಡಿ ನೌಕರ. | 8,445=00 | |
| 16 | ಶ್ರೀ.ನರಸಿಂಹಯ್ಯ, ಗ್ರೂಪ್ ಡಿ ನೌಕರ. | 8,495=00 | |
| | **ತಾಂತ್ರಿಕ ಸಿಬ್ಬಂದಿ** | | |
| 17 | ತಾಂತ್ರಿಕ ಸಹಾಯಕರು, ಎ.ಡಿ.ಎಲ್.ಆರ್. ಖಾಲಿ ಇದೆ. | | |
| 18 | ಶ್ರೀ.ಆರ್.ಕೆ.ಮಂಜುನಾಥ್, ದ್ವಿತೀಯದರ್ಜೆ ಭೂ ಮಾಪಕರು | 10,525=00 | |
| | **2015–ಚುನಾವಣಾ ಲೆಕ್ಕ ಶೀರ್ಷಿಕೆ** | | |
| 20 | ಶ್ರೀಮತಿ.ಬಿ.ಆರ್.ಗಾಯತ್ರಿ, ಪ್ರಥಮದರ್ಜೆ ಸಹಾಯಕರು | 12,525=00 | |

**4(I)BXI ಯೋಜನೆ ವಿವರಗಳು:– ಪ್ರಸ್ತಾವಿಕ ವೆಚ್ಚಗಳು ಮತ್ತು ಬಟವಾಡೆ ಮಾಡಿದ ವರದಿಗಳನ್ನೊಳಗೊಂಡಂತೆ ಪ್ರತಿ ಏಜೆನ್ಸಿಗೂ ಹಂಚಿಕೆ ಮಾಡಿದ ಆಯವ್ಯಯ:–**

2006–07 ನೇ ಸಾಲಿಗೆ 2053–00–094–1–01 ಲೆಕ್ಕ ಶೀರ್ಷಿಕೆಯಡಿ ಬಿಡುಗಡೆಯಾಗಿರುವ ಅನುದಾನದ ವಿವರ.

| ಕ್ರ. ಸಂ. | 041 ಪ್ರಯಾಣ ವೆಚ್ಚ | 051 ಸಾಮಾನ್ಯ ವೆಚ್ಚಗಳು | 052 ದೂರವಾಣಿ ವೆಚ್ಚಗಳು | 071 ಕಟ್ಟಡ ವೆಚ್ಚಗಳು | 195 ಸಾರಿಗೆ ವೆಚ್ಚಗಳು |
|---|---|---|---|---|---|
| 1 | 32000=00 | 9000=00 | 51000=00 | 21000=00 | 1,31,000=00 |

**4(1)BXII ಹಣ ಹಂಚಿಕೆ ಮಾಡಿದ ವಿವರಗಳನ್ನೊಳಗೊಂಡಂತೆ ಕಾರ್ಯಕ್ರಮಗಳು ಫಲಾನುಭವಿಗಳ ವಿವರ ಹಾಗೂ ಸಹಾಯ ಧನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ವಿಧಾನ:–**

ರಾಷ್ಟ್ರೀಯ ಕುಟುಂಬ ಯೋಜನೆಯಡಿಯಲ್ಲಿ ಆರ್ಥಿಕ ಸೌಲಭ್ಯ ನೀಡುವ ಬಗ್ಗೆ 2007–08ನೇ ಸಾಲಿಗೆ ರೂ. ಗಳು ಬಿಡುಗಡೆಯಾಗಿದ್ದು, ರೂ.ಗಳು ಖರ್ಚಾಗಿರುತ್ತದೆ. ಇತರ ಸಹಾಯಧನ ನೀಡುವ ಕಾರ್ಯಕ್ರಮ ಈ ಕಛೇರಿಯಲ್ಲಿ ಇಲ್ಲ.

**4(1)BXIII ರಿಯಾಯಿತಿಗಳು, ಅಪ್ಪಣೆ ಪತ್ರಗಳು ಅಥವಾ ಅಧಿಕಾರ ಪತ್ರಗಳನ್ನು ಪಡೆದವರ ವಿವರಗಳು.**

ಯಾವುದೇ ರಿಯಾಯಿತಿಗಳು, ಅಪ್ಪಣೆ ಪತ್ರ ಮಂಜೂರು ಮಾಡಿರುವುದಿಲ್ಲ. 4(1)BX1V ಉಪವಿಭಾಗದಲ್ಲಿ ದೊರೆಯುವ ಅಥವಾ ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಇಳಿಸಿರುವ ಮಾಹಿತಿಗಳು ವಿವರಗಳು:–

-----ಇಲ್ಲ---

4(1)BXV ಗ್ರಂಥಾಲಯವನ್ನು ಸಾರ್ವಜನಿಕರ ಬಳಕೆಗೆ ನಿರ್ವಹಿಸಿದ್ದಲ್ಲಿ, ಗ್ರಂಥಾಲಯವು ಅಥವಾ ವಾಚನಾಲಯವು ಕಾರ್ಯ ನಿರ್ವಹಿಸುವ ಸಮಯ ಹಾಗೂ ಸಾರ್ವಜನಿಕರಿಗೆ ಮಾಹಿತಿಯನ್ನು ಪಡೆಯಲು ಇರುವ ಅನುಕೂಲತೆಗಳ ವಿವರಗಳು:–

–ಸಾರ್ವಜನಿಕರ ಬಳಕೆಗೆ ಗ್ರಂಥಾಲಯ ನಿರ್ವಹಿಸಿಲ್ಲ–

**4(1)b XVI ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ಇತರೆ ವಿವರಗಳು:–**

1. ಶ್ರೀ.ಎಂ.ಆರ್.ರವಿಕುಮಾರ್, ಕೆ.ಎ.ಎಸ್. ಉಪವಿಭಾಗಾಧಿಕಾರಿಗಳು. — ಸಾರ್ವಜನಿಕ ಮಾಹಿತಿ ಅಧಿಕಾರಿ, ಉಪವಿಭಾಗಾಧಿಕಾರಿಗಳ ಕಛೇರಿ, ತುಮಕೂರು ಉಪವಿಭಾಗ ಮತ್ತು ಮೇಲ್ಮನವಿ ಪ್ರಾಧಿಕಾರಿ, ತುಮಕೂರು ಉಪ ವಿಭಾಗ.
2. ಶ್ರೀ.ತಿಮ್ಮೇಗೌಡ, ಮ್ಯಾನೇಜರ್, ಉಪವಿಭಾಗಾಧಿಕಾರಿಗಳ ಕಛೇರಿ. — ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ. ಉಪವಿಭಾಗಾಧಿಕಾರಿಗಳ ಕಛೇರಿ, ತುಮಕೂರು ಉಪವಿಭಾಗ.

**ಸಾರ್ವಜನಿಕ / ಉಪ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಪಟ್ಟಿ ಉಪವಿಭಾಗಾಧಿಕಾರಿಗಳ ಕಛೇರಿ, ತುಮಕೂರು.**

| ಇಲಾಖೆ | ಜಿಲ್ಲೆ/ ತಾಲ್ಲೋಕು ಗ್ರಾಮ | ಪದನಾಮ | ಕಛೇರಿ ವಿಳಾಸ | ದೂರವಾಣಿ ಮೊಬೈಲ್ ಫ್ಯಾಕ್ಸ್ ಸಂಖ್ಯೆ. | ಅಧಿಕಾರಿಗಳ ನೇಮಕಾತಿ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ. |
|---|---|---|---|---|---|
| ಕಂದಾಯ | ಉಪ ವಿಭಾಗಾಧಿಕಾರಿಗಳು, ಉಪವಿಭಾಗಾಧಿಕಾರಿಗಳ ಕಛೇರಿ. | ಸಾರ್ವಜನಿಕ ಮಾಹಿತಿ ಅಧಿಕಾರಿ. | ಉಪವಿಭಾಗಾಧಿಕಾರಿಗಳ ಕಛೇರಿ, 1ನೇ ಮಹಡಿ, ಮಿನಿವಿಧಾನಸೌಧ, ತುಮಕೂರು. | 2278493 (ಕಛೇರಿ) 2284040 (ಮನೆ) 9448579297 ಫ್ಯಾಕ್ಸ್ ಇಲ್ಲ. | ಕಂ.ಇ.37, ವಿಮಕ.2005, ದಿ:12.8.2005. |
| ಕಂದಾಯ | ವ್ಯವಸ್ಥಾಪಕರು, ಉಪವಿಭಾಗಾಧಿಕಾರಿಗಳ ಕಛೇರಿ. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ. | ಉಪವಿಭಾಗಾಧಿಕಾರಿಗಳ ಕಛೇರಿ, 1ನೇ ಮಹಡಿ, ಮಿನಿವಿಧಾನಸೌಧ, ತುಮಕೂರು. | 2278493 (ಕಛೇರಿ) 9945917894 | ಕಂ.ಇ.37, ವಿಮಕ.2005, ದಿ:12.8.2005 |

ಉಪವಿಭಾಗಾಧಿಕಾರಿಗಳು,
ತುಮಕೂರು ಉಪವಿಭಾಗ.

ಪಿ.ಆರ್.397

**ಯುವಜನಸೇವಾ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ಯುಸೇಇ 94 ಸಮನ07, ಬೆಂಗಳೂರು, ದಿನಾಂಕ:4ನೇ ಅಕ್ಟೋಬರ್, 2007**

**ವಿಷಯ:** ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 4(1)(ಬಿ) ಪ್ರಕಾರ ಯುವಜನ ಸೇವಾ ಇಲಾಖೆಯ ಮಾಹಿತಿ ಕೈಪಿಡಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ:** ಅಧಿಸೂಚನೆ ಸಂಖ್ಯೆ: ವಾಪ್ರಯು 41 ಸಮನ 06 ದಿನಾಂಕ:24.6.2006.

ಉಲ್ಲೇಖಿತ ಅಧಿಸೂಚನೆಯಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 4(1)(ಬಿ) ಪ್ರಕಾರ ಪ್ರಕಟಿಸಲಾಗಿದ್ದ ಯುವಜನ ಸೇವಾ ಇಲಾಖೆಯ ಕೈಪಿಡಿಯನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**4.(1) ಬಿ (i) ಸಂಸ್ಥೆಯ ರಚನೆ, ಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು**



**ಈ ಇಲಾಖೆಯ ವಿವಿಧ ಶಾಖೆಗಳಲ್ಲಿ ಈ ಕೆಳಕಂಡ ಕೆಲಸಗಳನ್ನು ನಿರ್ವಹಿಸಲಾಗುತ್ತಿದೆ: ಯುವಜನ ಸೇವಾ ಇಲಾಖೆ:**

1) ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು.
2) ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡಮಿಗೆ ಸಂಬಂಧಿಸಿದ ವಿಷಯಗಳು.
3) ಯುವಜನ ಸೇವೆಗಳು ಮತ್ತು ಕ್ರೀಡಾ ಇಲಾಖೆಯ ಹಲವು ಯೋಜನಾಭಿವೃದ್ಧಿ ಹಾಗೂ ಕ್ರೀಡಾಭಿವೃದ್ಧಿ ಕುರಿತಾದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳ ಅನುಷ್ಠಾನ ಕುರಿತಾದ ವಿಷಯಗಳ ಸಂಸ್ಕರಣೆ ಹಾಗೂ ಅನುದಾನ ಬಿಡುಗಡೆ ಕುರಿತಾದ ಆದೇಶ ಹೊರಡಿಸುವಿಕೆ.
4) 4ನೇ ರಾಷ್ಟ್ರೀಯ ಕ್ರೀಡೆಗಳಿಗೆ ಸಂಬಂಧಿಸಿದಂತೆ ಬಾಕಿ ಇರುವ ವಿಷಯಗಳು.
5) 4ನೇ ರಾಷ್ಟ್ರೀಯ ಕ್ರೀಡಾ ಸಂಘಟನೆಯ ಸಂದರ್ಭದಲ್ಲಿ ನಿರ್ಮಿಸಲಾದ ಬೃಹತ್ ಕ್ರೀಡಾಂಗಣಗಳ ನಿರ್ವಹಣಾ ಸಮಿತಿಯ ಪ್ರಸ್ತಾವನೆಗಳ ನಿರ್ವಹಣೆ.
6) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಬಂಧಿಸಿದಂತೆ ಎಲ್ಲಾ ವಿಷಯಗಳು.
7) ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮೀಣ ಮಟ್ಟದಲ್ಲಿ ಕ್ರೀಡಾ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಕುರಿತಾದ ವಿಷಯಗಳು.
8) ಜಿಲ್ಲಾ ಕ್ರೀಡಾಂಗಣಗಳು, ಕ್ರೀಡಾ ಸಮುಚ್ಚಯಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ, ರಾಜ್ಯ ವಲಯದಿಂದ ಅನುದಾನ ಬಿಡುಗಡೆ ಮಾಡುವ ಹಾಗೂ ಕೇಂದ್ರ ಸರ್ಕಾರದ ಸಹಾಯಾನುದಾನ ಕೋರಿ ಪ್ರಸ್ತಾವ ಸಲ್ಲಿಸುವ ಕುರಿತಾದ ವಿಷಯಗಳು,
9) ಮಹಾಲೇಖಪಾಲರ ತಪಾಸಣಾ ವರದಿ, ಕರಡು ಕಂಡಿಕೆಗಳು, ಸಿ.ಎ.ಜಿ. ರವರ ವರದಿ ಹಾಗೂ ಸಾರ್ವಜನಿಕ ಲೆಕ್ಕಪತ್ರ ವರದಿಗಳ ಕುರಿತದ ವಿಷಯಗಳ ನಿರ್ವಹಣೆ.
10) ಯುವ ಪ್ರಶಸ್ತಿಗಳ ಕುರಿತಾದ ವಿಷಯಗಳ ನಿರ್ವಹಣೆ.
11) ಅಖಿಲ ಭಾರತ ನಾಗರೀಕ ಸೇವಾ ಕ್ರೀಡಾ ಪಂದ್ಯದಲ್ಲಿ ಭಾಗವಹಿಸುವ ಸರ್ಕಾರಿ ನೌಕರರ ಆಯ್ಕೆ ಹಾಗೂ ನಿಯೋಜನೆ ಕುರಿತಾದ ಪ್ರಸ್ತಾವಗಳ ನಿರ್ವಹಣೆ.
12) ತಾಲ್ಲೂಕು ಕ್ರೀಡಾಂಗಣಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ ಹಾಗೂ ಕೇಂದ್ರ ಸರ್ಕಾರದ ಸಹಾಯಾನುದಾನ ಪಡೆಯುವ ಕುರಿತಂತೆ ಪ್ರಸ್ತಾವ ಸಲ್ಲಿಸುವ ಬಗೆಗಿನ ವಿಷಯಗಳು.
13) ಸರ್ಕಾರಿ ವೈಮನಿಕ ತರಬೇತಿ ಶಾಲೆಗೆ ಸಂಬಂಧಿಸಿದಂತೆ ಸೇವಾ ವಿಷಯಗಳು ನಿರ್ವಹಣೆ.
14) ಮೇಲಿನ ವಿಷಯಗಳಿಗೆ ಸಂಬಂಧಿಸಿದಂತೆ ವಿಧಾನಸಭೆ:ವಿಧಾನಪರಿಷತ್ ಪ್ರಶ್ನೆಗಳು, ಭರವಸೆಗಳು, ಅರ್ಜಿಗಳು, ಗಮನ ಸೆಳೆಯುವ ಸೂಚನೆಗಳು ಇತ್ಯಾದಿ ಹಾಗೂ ನ್ಯಾಯಾಲಯ ಪ್ರಕರಣಗಳು.
15) ರಾಷ್ಟ್ರೀಯ ಸೇವಾ ಯೋಜನಾ ವಿಷಯಕ್ಕೆ ಸಂಬಂಧಿಸಿದ ವಿಷಯಗಳು.

**ಆಂತರಿಕ ಆರ್ಥಿಕ ಸಲಹೆಗಾರರ (ಆಯವ್ಯಯ) ಶಾಖೆ:**

1) ಕಂದಾಯ ಇಲಾಖೆ ಹಾಗೂ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಆಯವ್ಯಯ ತಯಾರಿಕೆ
2) ಮೇಲ್ಕಂಡ ಇಲಾಖೆಗೆ ಸಂಬಂಧಿಸಿದ ಆಡಿಟ್ ಆಕ್ಷೇಪಣೆ:ಸಿಎಜಿ ಕಂಡಿಕೆಗಳ ಪರಿಶೀಲನೆ.
3) ಆಯವ್ಯಯ ಲೆಕ್ಕಶೀರ್ಷಿಕೆಗೆ ಸಂಬಂಧಿಸಿದಂತೆ ಸ್ಪಷ್ಟೀಕರಣ.

**ಆಂತರಿಕ ಆರ್ಥಿಕ ಸಲಹೆಗಾರರ (ಅಭಿಪ್ರಾಯ) ಶಾಖೆ**

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯ ಹಾಗೂ ಅನುದಾನ ಬಿಡುಗಡೆಯ ಪ್ರಸ್ತಾವನೆಗೆ ಅಭಿಪ್ರಾಯ ನೀಡುವುದು.

**ರಾಷ್ಟ್ರಿಯ ಸೇವಾ ಯೋಜನಾ ಕೋಶ:**

1) ರಾಜ್ಯದ ಎಲ್ಲಾ ವಿಶ್ವವಿದ್ಯಾಲಯ/ನಿರ್ದೇಶನಾಲಯಗಳ ಎನ್.ಎಸ್.ಎಸ್. ಚಟುವಟಿಕೆಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣ.
2) ವಿಶ್ವವಿದ್ಯಾಲಯ/ನಿರ್ದೇಶನಾಲಯಗಳಿಗೆ ಸರಿಯಾದ ಸಮಯಕ್ಕೆ ಅನುದಾನ ಬಿಡುಗಡೆ ಮಾಡುವುದು.
3) ವಿಶ್ವವಿದ್ಯಾಲಯ/ನಿರ್ದೇಶನಾಲಯಗಳ ಎನ್.ಎಸ್.ಎಸ್.ಸಲಹಾ ಸಮಿತಿ ಸಭೆ; ವಿಚಾರ ಸಂಕೀರ್ಣ, ಕಾರ್ಯಗಾರ ಇತರೆ ಕಾರ್ಯಕ್ರಮಗಳಿಗೆ ಸರ್ಕಾರದ ಪರವಾಗಿ ಭಾಗವಹಿಸುವುದು.
4) ಸರ್ಕಾರದ ನಿಯಮಾವಳಿಗಳ ರೀತ್ಯಾ ಅನುದಾನವನ್ನು ಬಳಕೆ ಮಾಡಲಾಗಿದೆಯೇ ಎಂಬುವುದರ ಬಗ್ಗೆ ಪರಿವೀಕ್ಷಣೆ ಮಾಡುವುದು.
5) ಲೆಕ್ಕ ಪತ್ರದ ವರದಿಗಳು, ಕಾರ್ಯಕ್ರಮಗಳ ವರದಿಗಳು ಕಲಾನುಕಾಲಕ್ಕೆ ಬರುವಂತೆ ನೋಡಿಕೊಳ್ಳುವುದು.
6) ರಾಜ್ಯ ಮಟ್ಟದ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆಯನ್ನು ಏರ್ಪಡಿಸುವುದು.

